# ಮರದೆದುರಲ್ಲಿ

ಪರಾಮರ್ಶೆಗಾಗಿ



ವಾಮನ

* ಅಳಿಲ ಸೇವೆ ಗ್ರಂಥಮಾಲೆಯ ೧೩ನೆಯ ಕುಸುಮ *

# ಮರದೆದುರಲ್ಲಿ

## ಮತ್ತು ಇತರ ಕವನಗಳು

೧೯೪೩

ವಾಮನ

* ಮಿತ್ರಮಂಡಳಿ, ಮಂಗಳೂರು *

# ಕನ್ನಡಿಗರಿಗೆ

ಕನ್ನಡದ ಹಿರಿಯರಿರ!
ಕನ್ನಡದ ಕಿರಿಯರಿರ!
ಇದುವೆ ನಿಮಗಾಗಿ,
ಇದು ಇಂದಿಗಾಗಿ.

ಕನ್ನಡದ ಮಕ್ಕಳಿರ!
ಕನ್ನಡದ ಮರಿಗಳಿರ!
ಕನ್ನಡದ ಈ ಚೆನ್ನು—
ಇದುವೆ ನಿಮಗಾಗಿ,
ಇದು ನಾಳೆಗಾಗಿ.

ಕನ್ನಡದ ಚೆಲುವೆಯರೆ,
ಕನ್ನಡದ ಚೆನ್ನಿಗರೆ,
ಕನ್ನಡದ ಈ ಚೆನ್ನು—
ಇದುವೆ ನಿಮಗಾಗಿ,
ಎಂದೆಂದಿಗಾಗಿ.

# ಅನುಕ್ರಮಣಿಕೆ

# ಮಾಲೆಯ ಪರವಾಗಿ ಮಾತು

ಶ್ರೀ. ಜೆ. ವಾಮನ ಭಟ್ಟ, ಬಿ. ಎ., ಎಲ್. ಟಿ., ಇವರ "ಮರದೆದುರಲ್ಲಿ" ಕವನಸಂಗ್ರಹವನ್ನು 'ಅಖಿಲ ಸೇವೆ ಗ್ರಂಥಮಾಲೆ'ಯ ಪುಷ್ಪವಾಗಿ ಕನ್ನಡಿಗರಿಗೆ ಸಮರ್ಪಿಸಲು ಮಿತ್ರಮಂಡಳಿಯು ಸಂತೋಷಿಸುತ್ತದೆ. ಈ ಸಂತೋಷವು ದ್ವಿಮುಖವಾಗಿರುವುದು; ಮೊದಲನೆಯದಾಗಿ, ಮಂಡಳಿಯು ಯುದ್ಧಕಾರಣದಿಂದ ಕಳೆದ ವರ್ಷವಿಡೀ ಒಂದೂ ಗ್ರಂಥವನ್ನು ಕನ್ನಡಿಗರಿಗೆ ಕಾಣಿಕೆಯಾಗಿ ಕೊಡಲು ಅಸಮರ್ಥವಾಗಿರಲು ಈ ವರ್ಷ ಇಷ್ಟರಲ್ಲೇ ಇದೊಂದನ್ನು ಅರ್ಪಿಸಲು ಅನುವಾದುದಕ್ಕೆ; ಎರಡನೆಯದಾಗಿ ಶ್ರೀ. ಭಟ್ಟರ ಅಲ್ಲಿ ಇಲ್ಲಿ ಚದರಿದ್ದ ಉತ್ತಮ ಕೃತಿಗಳನ್ನೆಲ್ಲ ಒಟ್ಟಿಗೆ ಪೋಣಿಸಿ, ಬೇಕಾದವರಿಗೆ ಬೇಕಾದಾಗ ಒಮ್ಮೆಲೇ ದೊರಕುವಂತೆ ಮಾಡಲು ಅನುಕೂಲವಾದುದಕ್ಕೆ.

ಶ್ರೀ. ಭಟ್ಟರು ಮಿತ್ರಮಂಡಳಿಯ ಮೂಲ ಸ್ಥಾಪಕರಲ್ಲೊಬ್ಬರು; ಅಂದಿನಿಂದ ಇಂದಿನವರೆಗೆ ಮಂಡಳಿಯ ಸೂತ್ರಧಾರರು. ಒಬ್ಬ ಮಿತ್ರರಿಂದ "ಶ್ರೀ. ವಾಮನ ಭಟ್ಟರೆಂದರೆ ಚಟುವಟಿಕೆ, ಚಟುವಟಿಕೆಯೆಂದರೆ ವಾಮನ ಭಟ್ಟರು" ಎಂದೆನ್ನಿಸಿಕೊಂಡಿದ್ದು, ಅಷ್ಟರ ಮಟ್ಟಿಗೆ ಹುಮ್ಮಸ್ಸಿನಿಂದ ಸಾಹಿತ್ಯಸೇವೆಯಲ್ಲಿ ನಾನಾಮುಖವಾಗಿ ಹೆಣಗುತ್ತಿರುವವರು. ಪರಸ್ಥಳದಲ್ಲಿದ್ದಾಗಲೂ ಸಹ ಅವರ ಧ್ಯಾನವು ಮಿತ್ರಮಂಡಳಿಯೇ ಆಗಿತ್ತೆಂಬುದಕ್ಕೆ ಈ ಸಂಗ್ರಹದೊಳಗಿನ "ಕಳೆದ ವಿಜಯದಶಮಿ"ಯೇ ಸಾಕ್ಷ್ಯ. ಅಂತಹ ನಮ್ಮ ಮಿತ್ರರ ಈ ಕವನಸಂಗ್ರಹವನ್ನು ಕನ್ನಡಿಗರ ಮುಂದಿಡುವ ಸುಯೋಗವು ಒದಗಿದುದಕ್ಕಾಗಿ ಮಂಡಳಿಯು ಹೆಮ್ಮೆಪಡಲೇಬೇಕು.

ಶ್ರೀ. ಭಟ್ಟರು ತಮ್ಮ "ಕೋದಂಡನ ಉಪನ್ಯಾಸಗಳಿ"ಂದ ಹೊಸ ಮಾದರಿಯ ಸಾಹಿತ್ಯದಲ್ಲಿ ಮಾರ್ಗದರ್ಶಿಗಳಾದರು. ಅವುಗಳಿಂದಲೇ

ಅವರು ಕನ್ನಡಿಗರಿಗೆ ಸುಪರಿಚಿತರು. ಅವರ ಪ್ರಯತ್ನಗಳ ಸುಫಲವಾಗಿ ಪೋಣಿಸಲ್ಪಟ್ಟಿರುವ "ಅಖಿಲಸೇವೆ ಗ್ರಂಥಮಾಲೆ"ಯಲ್ಲಿ, ಎಂಟನೆಯ ಪುಷ್ಪವಾದ "ಶಕುಂತಳೆ"ಯಿಂದಲೂ, "ಅಖಿಲಸೇವೆ", "ತಾಯ್ನಾಡು", "ಅಲರು", "ನಮ್ಮ ಕವಿತೆಗಳು"—ಇವುಗಳಲ್ಲಿನ ಹಲವು ಮನೋಹರ ಕವನಗಳಿಂದಲೂ, ಇತರ ಸಂಕಲನಗಳಲ್ಲಿನ ಕೆಲವು ಗಂಭೀರ ಲೇಖನಾದಿಗಳಿಂದಲೂ ಅವರ ಪ್ರತಿಭೆ, ರಚನಾ ಕೌಶಲ್ಯ, ಶೈಲಿಮಾಧುರ್ಯ, ವಿಷಯಗಾಂಭೀರ್ಯ ಮುಂತಾದುವುಗಳು ನಮಗೆ ಅನುಭವಕ್ಕೆ ಬರುವುವು. ಶ್ರೀ. ಭಟ್ಟರ ಕವನಗಳಲ್ಲಿನ ವೈಶಿಷ್ಟ್ಯಗಳೆಂದರೆ, ಅವು ಹೆಚ್ಚಾಗಿ ಸರಳವೂ, ಸರಸವೂ ಆಗಿರುವುವು; ಅವುಗಳಲ್ಲಿ ಶಬ್ದಾಡಂಬರದ ಗೊಂದಲವೇ ಇಲ್ಲ; ಭಾವವು ಓಜಃಪುಂಜವಾಗಿದ್ದು ಸಹಜವೂ ಲಲಿತವೂ ಹೃದಯಂಗಮವೂ ಆಗಿ ಹರಿಯುತ್ತಿರುವುದು. "ಮರದೆದುರಲ್ಲಿ" ಬೀರುವ ಅವರ ಸೌರಭವು ಕರ್ಣಾಟಕದಲ್ಲೆಲ್ಲ ಹರಡಿ ಮಿತ್ರಮಂಡಳಿಯ ಈ ಅಖಿಲಸೇವೆಯು ಸಾರ್ಥಕವಾಗಲೆಂದು ಆಶಿಸುವೆನು.

ಮಿತ್ರಮಂಡಳಿ, ಮಂಗಳೂರು,
6—2—1943.

ಎಸ್. ಪಿ. ಭಟ್ಟ

# ಬಿನ್ನಹ

ಈ ಕವನಗಳನ್ನು ಓದಿದಾಗಲೆಲ್ಲ ಹಳೆಯ ಮಿತ್ರರ ಸ್ಮೃತಿಗಳು ಮಿನುಗಿ ಬರುತ್ತಿವೆ. ಬಾಲ್ಯದಲ್ಲಿ ಮತ್ತೆ ಅದರ ಅನಂತರದಲ್ಲಿ ಯಾವ ಮಿತ್ರರೊಡನೆ ವಿಶಿಷ್ಟವಾದ ಲೋಕವೊಂದನ್ನು, ವಿಶಿಷ್ಟವಾದ ಜೀವನವೊಂದನ್ನು ರೂಪಿಸಿಕೊಳ್ಳುತ್ತಿದ್ದೆನೋ, ಆ ಮಿತ್ರರ ನೆನಪು ಸವಿಯಾದ ಅನುಭವವಾಗಿದೆಯೆಂಬುದನ್ನು ನೆನೆಯುತ್ತಿದ್ದಂತೆ, ಆ ಮಿತ್ರರೊಡನೆ ಕಟ್ಟಿಕೊಂಡ ಯಾವ ಸಹವಾಸವಿದೆ, ಆ ಮಿತ್ರರೊಡನೆ ಗಳಿಸಿಕೊಂಡ ಯಾವ ನಲವು ಗೆಲವುಗಳಿವೆ—ಅದೆಲ್ಲವೂ ನನ್ನೀ ಜೀವನದಲ್ಲಿ ಸ್ಥಿರವಾಗಿ ನಿಂತ ಕೆಲವು ಧ್ರುವತಾರೆಗಳಾಗಿವೆಯೆಂದು ತಿಳಿಯುತ್ತಿದ್ದೇನೆ. ಆ ಮಿತ್ರರೊಡನೆ ನಾನಿಟ್ಟುಕೊಂಡುಬಂದಂತಹ ಓರಗೆಯು ಇಂದಿನ ದಿವಸ ತಪ್ಪಿಹೋದಾಗಲೆಲ್ಲ, ಆ ಹಿಂದಿನ ಅಕಾರಣಮನೋಹರವಾದ ಪರಸ್ಪರ ಸಂಬಂಧದ ಸ್ವರೂಪವು ತನ್ನ ಬಿಗುವಿನಿಂದಲೂ ಶಕ್ತಿಯಿಂದಲೂ ಹಾಗೂ ಸ್ನೇಹದಿಂದಲೂ ಮನದಟ್ಟಾಗಿ ತೋರಿಬರುತ್ತಿದೆ. ಆ ಹಿಂದಿನ ಬಾಲ್ಯದ ಮಿತ್ರರೆಲ್ಲ ಇಂದಿನ ದಿವಸ ವಿಸ್ತಾರವಾದ ಪೃಥ್ವಿಯಲ್ಲಿ ಚದರಿರುವರು; ಕೆಲವರು ಮಿನುಗಿ ಆರಿಹೋದ ತಾರೆಗಳಾಗಿ ಮಾಯವಾಗಿರುವರು. ಆದರೆ, ಚದರಿದ ಪೃಥ್ವಿಯನ್ನು ಈಯೆನ್ನ ಕೆಲವು ಕವನಗಳು ನನಗಾಗಿ ಒಟ್ಟುಗೂಡಿಸುತ್ತಿವೆ; ಅಳಿದುಳಿಯುತ್ತಿರುವ ಸೃಷ್ಟಿಯನ್ನು ನನಗಾಗಿ ಸ್ಫೋಟಲಕ್ಷಣವಾದ ಶಬ್ದದಲ್ಲಿ ಹುದುಗಿಸಿಡುತ್ತಿವೆ. ಆ ಕಾರಣದಿಂದಲೆ ಈ ಕವನಗಳಿಗೆ ಮುದ್ರಣದ ಮುದ್ರೆಯನ್ನು ಒತ್ತಿರುತ್ತೇನೆ.

ಈ ಚಿಕ್ಕ ಕವನಗಳನ್ನು ಮಂಗಳೂರು ಮಿತ್ರಮಂಡಳಿಯವರು ಅಖಿಲ ಸೇವೆ ಗ್ರಂಥಮಾಲೆಯಲ್ಲಿ ಪೋಣಿಸಲು ಒಪ್ಪಿದಕ್ಕೆ ನಾನು ಬಹಳ ಕೃತಜ್ಞನಾಗಿರುತ್ತೇನೆ. ಮಿತ್ರಮಂಡಳಿಯು ಕವಿಗಳ ಸಂಘವಾಗಿಯೆ

ಜನ್ಮವೆತ್ತಿತು, ಕಾವ್ಯಮಯವಾದ ಜೀವನವನ್ನೇ ರಸಿಕರಿಗೆ ಒದಗಿಸಿತು. ಅಂತಹ ಜೀವನದ ದರ್ಶನವು ಮಿತ್ರಮಂಡಳಿಯಿಂದಲೆ ನನಗುಂಟಾಯಿತು. ಮಿತ್ರಮಂಡಳಿಯ ಆದಿಕವಿಗಳು, ರಾಘವಾಚಾರ್ಯರು ಹಾಗೂ ಅವರ ಅಣ್ಣ ತಿಮ್ಮಪ್ಪಾಚಾರ್ಯರು, ಒಂದುತರದ ಕನ್ನಡದ ಜೀವನವನ್ನು ನಮ್ಮಾ ದೇಹಗಳಲ್ಲಿ ಹೊಯ್ದುಬಿಟ್ಟಿದ್ದರು; ಆ ಇಬ್ಬರು ಅಣ್ಣತಮ್ಮಂದಿರ ನೆನಪನ್ನು ಈಗ ಮಾಡುತ್ತಿದ್ದಂತೆ, ಮಂಗಳೂರಿನಲ್ಲಿ ಅವರ ಸೃಷ್ಟಿಯಾದ ಕನ್ನಡದ ಉತ್ಸಾಹದಿಂದ ಕಟ್ಟಿಬಂದ ಅಳಿಲ ಸೇವೆ ಗ್ರಂಥಮಾಲೆಯಲ್ಲಿ ಈ ನನ್ನ ಅತ್ಯಲ್ಪವಾದ ಮುಗುಳು ಸೇರಿಕೊಂಡಿತೆಂಬುದಾಗಿ ಸಂತೋಷಪಡುತ್ತೇನೆ.

ಈ ಚಿಕ್ಕ ಪುಸ್ತಕವನ್ನು ಸುಂದರವಾಗಿ ಮುದ್ರಿಸಿ, ಯಥಾಪ್ರಾಪ್ತವಾಗಿ ಸಿದ್ಧಮಾಡಿ ಕೊಟ್ಟ ಸರಸ್ವತೀ ಮುದ್ರಣಾಲಯದ ಶ್ರೀ. ಯು. ಗಣೇಶ ಶೆಣೈಯವರಿಗೂ ಮುದ್ರಣದ ಹಸ್ತಪ್ರತಿಗಳನ್ನು ಕೂಲಂಕಷವಾಗಿ ಪರಿಶೋಧಿಸಿ ತಿದ್ದಿ ಸಹಕರಿಸಿದ ಮಿತ್ರಮಂಡಳಿಯ ಕಾರ್ಯದರ್ಶಿ ಡಾ। ಎಸ್. ಪಿ. ಭಟ್ಟರಿಗೂ ನಾನು ಕೃತಜ್ಞನಾಗಿರುತ್ತೇನೆ.

**ಮಿತ್ರಮಂಡಳಿ,**
6—2—1943.

**ವಾಮನ**

ऊर्ध्वमूलोऽवाकशाखः एषोऽश्वत्थः सनातनः ।

—कठोपनिषत्

# ಮರದೆದುರಲ್ಲಿ

೧

ಹಗಲನ್ನು ಕಟ್ಟಿರುಳು ಬೆಂಬತ್ತಿಬರಲಿ!
ನೀ ನಿನ್ನ ತನಿಗಂಪು ಸೂಸುತ್ತ ಬೆಳೆಯು.
ನೇಸರನ ಬಿಸಿಲಲ್ಲಿ ಬಳಲುತ್ತ, ತಿಂಗಳಿನ
ತಣ್ಪೀವ ಜೊನ್ನದಾ ಸೊಂಪಿನಲಿ ತಣಿಯು.
ಕೆಲಹೊತ್ತು ಬಾಳ್ದಳಿವ ತಿರೆಯಲ್ಲಿ ನೀನೊಮ್ಮೆ
ಮರೆಯುತ್ತ ತಂಬೆಲರ ಸೊಗಸಿಂಗೆ ತೂಗು.
ತುಂಬಿಗಳು ಹಾಡುಗಳನುಲಿವಂದು ನೆನೆಯುತ್ತ
ಕೊರಲನ್ನು ಒಲೆದಾಡಿ ತಿರವಾಗಿ ನಿಲ್ಲು.

ಕಣ್ಬಿಟ್ಟ ಕತ್ತಲೆಯ ಚುಕ್ಕಿಗಳು ಮಿನುಗೆ,
ಕಿತ್ತೊಡಲ ಚಿಗುರನ್ನು ಹೊರಸೂಸು ಕ್ರಮದೆ;
ಎಳಬಿಸಿಲ ಹೊಳಪಿನಲಿ ತುಂಬಿಗಳು ಉಲಿಯೆ,
ಮೊನೆಮುಗುಳ ಹೂವುಗಳ ಸೊಗಸನ್ನು ಬೀರು.

ಮುಂಬರಿವ ತಂಗಾಳಿ ಬಳಿಯಲ್ಲಿ ಸುಳಿಸುಳಿಯೆ,
ತರಗೆಲೆಯನುದುರಿಸಲು ನೀ ಕಂಪಿಸೊಮ್ಮೆ.
ಅಲ್ಲೊಂದು ಇಲ್ಲೊಂದು ಮುದಿಯೆಲೆಯು ಕೆಡಿಸುವುದು
ಮೆಲ್ದಳಿರ ಗೊಂಚಲಿನ ಓರಗೆಯ ಚೆಲುವು.
ಮುಂಜಾನೆ ನಸುಗಾಳಿ ಮೆಲ್ಲಡಿಯ ನಡೆಯಲ್ಲೆ
ಉಜ್ಜುಗದ ಬೆಜ್ಜರದ ಮನದಿಂದ ಸುಳಿಯೆ,
ನೀ ನಿನ್ನ ಹೂತಳಿರ ಇನಿಗಂಪ ಬೀಸಣಿಗೆ
ಬೀಸುತಲಿ ಬಳಿಯೆಲರ ಅಲಸಿಕೆಯ ತೂರು.

ಮುಂಜಾನೆ ತಂಗಾಳಿ ತಿಳಿಗಾಳಿಯಾಗಿ
ಅಜ್ಞಾನಮೇಘಗಳನೊತ್ತುವುದು ಬದಿಗೆ;
ಮನಸಿನಾ ಮುಂಬಾನ ಶುಭ್ರತೆಯು ಗಳಿಸೆ,
ಗಂಡಸಿನ ಬೀರವದು ಬೆಳಗುವುದು ನಿಜದೆ.

೨

**ಕು**ಸುಮಗಳ ತನಿಜೇನು ಇಬ್ಬನಿಯ ಅಡಿಯಲ್ಲಿ
ಮಿರುಮಿರುಗೆ, ಅಲೆದುಲಿದು ಸುಮದೊಂದು ಮೊಗಕೆ
ಬಂಡುಣಿಯು ಕಡೆಗೊಂದು ಮುತ್ತಿಡಲು, ಹೂತಳಿರ
ಇಬ್ಬನಿಯ ತುಂತುರಿನ ಕಂಬನಿಯ ಮಿಡಿಯು.
ಅಲರುಣಿಯು ಸೊದೆಜೇನನುಣುವಾಗಲನಿಮಿತ್ತ-
ರೀತಿಯಲಿ, ಎಲೆ ಮರವೆ, ನಡುಗೊಮ್ಮೆ ಇನಿತು;
ಆ ದುಂಬಿ ಒತ್ತಡವೆ ಬೆದರುತ್ತ, ಮೊಗವೆತ್ತಿ,
ನಸುನಕ್ಕು ತಿರಿಗೊಮ್ಮೆ ಕುಡಿಯುತ್ತಲಿರಲಿ.

ತುಂಬಿಗಳು ಹೂವುಗಳ ಜೇನನ್ನು ಹೀರೆ,
ಪರಿಮಳವು ದೆಸೆದೆಸೆಗೆ ಹರಡುವುದು ನಿಜವೆ?
ತಿರೆಗೊಂದು ಸವಿತಿಳಿದ ತುಂಬಿಗಳ ಒಸಗೆ
ಸಿರಿಬಗೆಯ-ಸಿಹಿಮಾತ-ಸವಿಹಾಡ ಸವಿಯೆ?

ಎಳದಳಿರ ಹಸುರೊಳಗೆ, ಅರೆಬಿರಿದ ನನೆಯಲ್ಲಿ,
ಕಾದಿಟ್ಟು ಇಬ್ಬನಿಯನಲ್ಲಿಂದ ನೀನು
ತುಂಬಿಗಳ ಮರಳಿಸುತ, ಎಳಬೆಳಗ ಕಾವನ್ನು
ತಣಿಸುತ್ತ, ಹೂವುಗಳ ಕಾಪಿನಲಿ ತೊಡಗು.
ಅರೆಬಿರಿದ ಮೊಗ್ಗುಗಳ ಒಳಹೊಕ್ಕು ತುಂಬಿಗಳು
ಎಸಳುಗಳ ಸಡಲಿಸುತ ತೋರಿಕೆಯ ನಗೆಯ
ಮುಗುಳಿಂಗೆ ಈಯಲದು ತುಂಬುನಗೆ ಮುಗ್ಗುವುದು;
ಮುಗ್ಗಲದು ನಲವಿಳಿದು ಸಿರಿ ಸೊನ್ನೆಯಹುದು.

ಮುಗುಳುಗಳ ಜೇನಿಂಗೆ ಸವಿಯಿಲ್ಲವಿನಿತು;
ಆರಡಿಯ ರಸಿಕಂಗೆ ಪುಸಿಸವಿಯು ಕಸವು.
ಪುಸಿಹೊತ್ತ ಬಾಳುವೆಯ ಕೈಮಾಟ-ಸೊಗಸು
ರಮಿಸುತ್ತ ಸೇವಿಸುವ ಅಳಿಗೊಂದು ತೊಡರು.

೩

ತುತ್ತತುದಿ ತಳಿರುಗಳ ತೊಟ್ಟಿಲಲಿ ಪವಡಿಸಿದ
ಬಿರಿಹೂವೆ, ನೀನೆದ್ದು ಕೆಳಗದರ ಉರುಳು.
ಇರುತಿಹುದು ತುಂಬಿಗಳ ನಲವಿಂದ ತೊನೆಯುತಿಹ
ತೂಗುಯ್ಯಲೊಂದಲ್ಲಿ, ತಿರಿಗೊಮ್ಮೆ ಉರುಳು.
ಇಲ್ಲೊಂದು ತೋಳುಗಳ ತಳ್ಕೆಯಲಿ ರೋಮಾಂಚ-
ಸುಖವನ್ನು ತಳೆಯುತ್ತ ಮಗುದೊಮ್ಮೆ ಬೀಳು.
ತಳಿರಿಂದ ತಳಿರಿಂಗೆ ಗೆಲ್ಲಿಂದ ಗೆಲ್ಲಿಂಗೆ
ಉರುಳುತ್ತ ಮೆಲ್ವಾಸ ನೆಲದಲ್ಲಿ ಮಲಗು.

ತೊಟ್ಟುದುರಿ ಮೇಲಿಂದ ಕೆಳಗುರುಳೆ ನೆಲಕೆ,
ಬಂಧುಗಳ ಸಾಂತ್ವನದ ಆರೈಕೆ ತಿಳಿಯೆ,
ಬೀಳ್ವಿಕೆಯ ದುಗುಡವನು ಸಂತೈಸಿ ಬಳಿಕ
ಸಾವನ್ನು ಸಾವಿನೊಳೆ ಮರೆಸುವುದು ಮರವೆ.

೪

ನೇಸರನ ಬಿರುಬಿಸಿಲು ಮೆರೆಮೆರೆಯೆ, ಹಕ್ಕಿಗಳ
 ಮೆಲ್ನುಡಿಗಳೋಲಾಡೆ ಗೂಡಿನೊಳಗೊಳಗೆ,
ಸರಿಸದಲಿ ಹರಿಯುತಿಹ ಹಳ್ಳಗಳ ತೊದಲುಲಿಯ
 ಹಾಡುಗಳನಾಲಿಸುತ ಬಗೆಯನ್ನು ತಣಿಸು.
ಆರಿಸಲು ನಡುಪಗಲ ದಣುವನ್ನು, ಹಸುಮೇಕೆ
 ಮೆಲುಕಾಡಿ ನಿನ್ನಡಿಯ ತಣ್ಣೆಳಲ ಸೇರೆ,
ಮೋಡಗಳು ಬಾನಿನಲಿ ಕೂಡುತ್ತ ಪಡಿನೆಳಲ
 ತಂಪನ್ನು ನಿನಗಿತ್ತು ಆಸರೆಯನೀಯೆ,

ಮುಗಿಲುಗಳು ಮುದುಡುತಿಹ ಚಿಗುರೆಲೆಯ ಕಂಡು,
ಕಂಬನಿಯ ಮಿಡಿಯುವುವು ಮೋನದಲಿ ಸುರಿದು;
ಕಿರಿಮಳೆಯ ತಟಕುಗಳ ಸೊದೆಯಲ್ಲಿ ಮಿಂದು,
ಮುಂಬನಿಯ ಒಲವನ್ನು ಪೊಗಳುವರು ಜನರು.

೫

ಹೂಬಿಸಿಲ ಬೈಗಿನಲಿ ಅಣುಗಿಯರು ಕೂಡುತ್ತ,
ಹಾಡುತ್ತ, ನಲಿಯುತ್ತ, ನಿನ್ನಡಿಯ ಸೇರಿ,
ಬಗ್ಗಿರುವ ಕೊಂಬೆಗಳನೆಳೆಯುತ್ತ ತನಿವಣ್ಣ
ಕೊಯ್ಯುತ್ತ, ಸವಿಯನ್ನು ಸವಿಯುತ್ತ, ಕಲಿತು—
ಟೊಂಗೆಗಳಿಗುಯ್ಯಾಲೆ ಇಳಿಸುತ್ತಲದರಲ್ಲಿ
ತೂಗುತ್ತ ಅಸವಳಿಯೆ ಇನ್ನೊಮ್ಮೆ ತೂಗಿ,
ಕತ್ತಲೆಯ ಒತ್ತಿನಲಿ ತೂಗನ್ನು ನಿಲ್ಲಿಸಲು
ಬೆದರುತ್ತ ಅಣುಗರಿಗೆ ಮೊರೆಯನ್ನು ಇಡಲಿ.

ಕೊಂಬೆಯಲಿ ಕುಳಿತಿರ್ದ ಅಣುಗರುರೆ ನಕ್ಕು
ತೂಗಾಟದಾನಂದ ಕೂಗಾಟವಾಗೆ,
ಅಣುಗಿಯರ ನಡು ನಿಂತು, ಅವರನ್ನು ಇಳಿಸೆ
ಉಯ್ಯಾಲೆ ಹಗ್ಗವನು ಹಿಡಿದಿಳಿಯುತಿರಲು—

ತೂಗಿಂತು ನಿಲ್ಲುವುದು; ಕನ್ನೆಯರು ಹಾರಿ
ಓಡುವರು ನಸುನಕ್ಕು; ಬಳಿಕೊಮ್ಮೆ ಹಿಂದೆ
ತಿರುಗುತ್ತ ನೋಡುವರು ಹಸುಳೆಗಳ ಮೊಗದೆ
ಕೊನೆಯಿರದ ಅಚ್ಚರಿಯ ಸೊಂಪನ್ನು, ಮರವೆ!

೬

ಅಂತಾಗೆ, ಗಿಡಬಳ್ಳಿ ಮರಪೊದರ ಹಸುರನ್ನು
ಬಲ್ಗತ್ತಲೆಯ ಕಪ್ಪು ಆವರಿಸಿ ಬರಲು,
ಎಲೆ ಮರವೆ, ಮೂಡಿರುವ ಚುಕ್ಕಿಗಳನೆಣಿಸಲ್ಕೆ
ಬಗೆಯುತ್ತ ಲೆಕ್ಕಿಸುವ ಪಡಿನೂರ ಶತಕೆ
ಹೊಸದೊಂದು ಚಿಗುರನ್ನು ಹೊರನೆಗೆಚು. ಬಳಿಕೆಣಿಕೆ-
ತಪ್ಪುತ್ತ ನಿನ್ನಲ್ಲಿ ಆಸರೆಯ ಪಡೆದ
ಹಕ್ಕಿಗಳ ಗೂಡುಗಳ, ಗೂಡುಗಳ ಪಕ್ಕಿಗಳ-
ನೆಣಿಸುತ್ತಲೆಣಿಸುತ್ತ ನಿದ್ದೆಯನು ಹೊಂದು.

ಕರಿಮುಗಿಲ ನಡುನಿಂತ ಬಿಳಿಮುಗಿಲ ಮರೆಗೆ
ತಿಂಗಳನು ನಡೆತಂದು ಬೆಳದಿಂಗಳೊಸರೆ,
ಕನಸೊಂದ ನೀನಾಂತು, ತಿರಿಗೊಮ್ಮೆ ಅವನು
ಗಹಗಹಿಸಿ ನಗುವಂದು, ಎಚ್ಚೆತ್ತು ನೆನೆಯು.

ಕನಸೊಳಗೆ, ನೂರಾರು ಹಣ್ಣುಗಳ ಹೊತ್ತು
ಹಾಸಿರುವ ನೆಲದಲ್ಲಿ ಬಾಗುತಲಿ ಮಲಗು.
ಎಳಮಕ್ಕಳೊಂದಾಗಿ ಕುಣಿಯುತ್ತ ಬಂದು
ನಲವೇರಿ ಹಣ್ಣುಗಳ ಕೊಯ್ಯುವವು ನಿಂದು.

ಗೂಡುಗಳ ಹಕ್ಕಿಗಳು ಮಕ್ಕಳಿಗೆ ಬೆದರಿ
ಮೊರೆಯಲ್ಕೆ, ಹಲಕೆಲವು ಸಿಕ್ಕಿದೆಡೆ ಪಾರೆ,
ಕೆಲಕೆಲವು ಪುಕ್ಕದಲಿ ಅಡಗಿಸುತ ಮರಿಯ
ಚೀರುತ್ತ ಬಾನಿಂಗೆ ಕೊನೆಗಣ್ಣು ತೋರೆ—

ಕನಸಿನಾ ಗಲಿಬಿಲಿಯ ನೀ ಕೇಳಿ ಬೆದರಿ,
ಕಂಪಿಸುತ ನಸುಗಾಳಿ ಹೊರಡಿಸುತಲೊಡನೆ
ನನಸಾಂತು ಕೇಳುವೆಯ ಸೊಗವಕ್ಕಿವಾತ?–
"ಇರುಳನ್ನು ಸುಖದಿಂದ ಕಳೆದಿಹೆವು," ಎಂದು.

# ನಿವೇದನ

ತರುಗುಲ್ಮ ಸಸ್ಯಲತೆಯಿಂ ನಿಬಿಡಮಹ ಭೂಮಿ-
ಯೊಳ್ ಪೂಜಿಸಲ್ ಭಾಗ್ಯಮೆನಗದಿಲ್ಲಂ.
ವಿಸ್ತಾರ ಬಾಹುಲ್ಯ ಸಂಜಾತ ವೈವಿಧ್ಯ
ದೇಶದೊಳ್ ಪೂಜಿಸಲ್ ತಾಣಮಿಲ್ಲಂ.
ಸ್ವಾತಂತ್ರ್ಯಸಾಮ್ರಾಜ್ಯದೊಳ್ ಗೀತಮೊಂದನ್ನು
ಪಾಡಲ್ಕೆ ಸ್ವಾಧೀನಪವನನಿಲ್ಲಂ.
ಕ್ಷಮಿಸೊಮ್ಮೆ, ಮುನಿಗೇಯೆ! ಹಾ ದೇವಿ! ತವ ಪೂಜೆ
ಬಿದ್ದಿಹುದು; ನೆನವು ಪೋಗಿರ್ಪುದಿಲ್ಲಂ.

ಅಂತಸ್ತುಷಾರಸುಮಸದೃಶಮಹ ಪ್ರೇಮಮಂ
ಬಾಷ್ಪದಿಂ ಕೂಡಿ ನಾನರ್ಪಿಪೆಂ, ದೇವಿ!
ಪ್ರೋತ್ತುಂಗ ಹಿಮವಂತದಂತುನ್ನತದ ಮನದೊ-
ಳಿರಿಸಿ ಪೂಜಿಪೆನು ಭಜಿಸುತ್ತ ನಿನ್ನಂ.
ತಿಳಿಯ ಮೌನದ ಶಾಂತಿಯೊಳ್ ಮನದ ನೀರವದ
ಗೀತಗಳ ಪಾಡುವೆಂ ಸ್ತುತಿಸಿ ನಿನ್ನಂ.
ಕ್ಷಮಿಸೊಮ್ಮೆ, ಮುನಿಗೇಯೆ! ಹಾ ದೇವಿ, ತವ ಪೂಜೆ
ಬಿದ್ದಿಹುದು; ನೆನವು ಪೋಗಿರ್ಪುದಿಲ್ಲಂ.

ಮಂಜುಲದ ಮಂಜಿನಾ ನುಂಬನಿಯ ಸೋನೆಯೊಳ್
ತಣ್ಪೀವ ಸ್ನಾನ ನಿನಗಿನ್ನು ದೇವಿ!
ನೈದಿಲೆಯನರಳಿಪಾ ಶರ್ವರಿಯ ಧ್ವಾಂತವದು
ಪರಿಮಳಿತ ಕಜ್ಜಲದ ಲೇಪ ನಿನಗೆ!
ಆಗಸದ ಮನಸೆಳೆವ ದರಹಾಸ ತಾರೆಗಳು
ಸಿಂಗರದ ತೊಡವುಗಳ್ ಮೈಗೆಲ್ಲ ನಿನ್ನ!
ಪೂಜೆಯದು ದಿನನಿತ್ಯ ನಡೆವುದಾ ನಿನಗಾಗಿ;
ಎನ್ನನ್ನು ಕ್ಷಮಿಸೊಮ್ಮೆ, ಹೇ ದೇವಿಯೇ!

ಪುಷ್ಪಗಳ ಸೌರಭದ ಸವಿಯೊಳರದುಂಬಿಗಳ್
ಪಾಡುವಾ ಬಂಧುರದ ಗುಂಜಿತಗಳೇಂ?
ಇನಿಗೊರಲ ಕೋಗಿಲೆಯು ಮಾಧವನ ಮಧುರಿಮೆಯ
ರಾಜ್ಯದಲಿ ನುಡಿಯುವಾ ನುಣ್ಚರಗಳೇಂ?
ಜ್ಞಾನಸಾಮ್ರಾಜ್ಯದೊಳ್ ಮಾನವಂ ಲೋಕಹಿತ-
ಕುಲಿಯುವಾ ಮೆಲ್ನುಡಿಯ ಭಾಷಿತಗಳೇಂ?—
ಹೇ ದೇವಿ! ತವ ಪೂಜೆಯಲ್ಲವೇಂ? ತಾಂ ನೆನೆವ
ನೆನವು ತಿರೆಯಂ ಚೇತರಿಪುದಲ್ಲವೇಂ?

# ಕವಿತೆ

ಕವಿತೆತಿಳಿವು ತೀಡಿಬರಲು
ಭುವಿಯ ಸರ್ವ ವಸ್ತುಚಯವು
ಸವಿಯ ಗಂಧವನ್ನು ಹರಡಿ ವಿವಿಧ ಜನಗಳ
ಮನಸಿನಲ್ಲಿ ಮಾಳ್ಪುದೊಮ್ಮೆ ಐಕ್ಯಭಾವವ.

ಕವಿಯ ವಚನ, ರವಿಯ ತೇಜ,
ಜವನ ಬಲವು ಸರ್ವಜನಕೆ
ಪಕ್ಷಪಾತವಿರದ ತೆರದಿ ತೋರಿ ಬರುವುದು;
ಕವಿಯ ವಚನ ನರನ ಮನವ ಪೂತಮಾಳ್ಪುದು.

ನಿಶೆಯ ಪತ್ರದಲ್ಲಿ ಬರೆದ
ತಾರಕೆಗಳ ಕೃತಿಯನೋದಿ
ಆವ ಮನುಜ ಶಾಂತಿಪಾಠದೊಲವ ತಿಳಿಯನು?—
ಆವ ನರನು ಶಾಂತಿಯಲ್ಲಿ ಲೀನನಾಗನು?

ಜೊನ್ನತಂಪಿನಲ್ಲಿ ಮಿಂಚು-
ಹುಳುವು ಬಂದು ತೇಲಿ ನಲಿದು
ಜನಕೆ ಬೀರೆ ತನ್ನ ಪುಟ್ಟ ಹರ್ಷಕೃತಿಯನು,
ಆವ ಭುವಿಯ ನರನ ಹೃದಯಕುಸುಮವರಳದು?

ಗಿರಿಯು ತೊರೆಯು ನಲಿದು ಇಳಿದು
ಜಗದ ಹಾಸಕವಿತೆ ತೋರೆ,
ಆವ ನರನ ಮನದೊಳಾಗ ನಗದು ಚಿತ್ರವು?—
ಕವಿಯ ಭಾವ ಪೊಗಳಿ ಆರ ನುಡಿಯು ನುಡಿಯದು?

ಮುಗಿಲ ನೆಳಲಿನಲ್ಲಿ ನವಿಲು
ಸತಿಯ ಪ್ರೇಮಕಾಗಿ ನಲಿಯೆ
ಆರ ಮನವು ಮೋಹಪಾಶದಲ್ಲಿ ನಲಿಯದು?—
ಆರ ಮನವು ಕವಿಯ ಕುಶಲವನ್ನು ನೆನೆಯದು?

ಘನದ ರವವ ಕೇಳಿಯದರ
ಸ್ತನಿತ ತನ್ನ ಮೇಲ್ಮೆಯನ್ನು
ಕಡಿಮೆ ಮಾಳ್ಪುದೆಂದು ಸಿಂಹ ಪಡಿಯಮಾತನು
ಕೊಡುವ ಕವಿತೆ ನೋಡದಿರುವ ಮನುಜನಾವನು?

ಅವನ ಕವಿತೆ ಪೋಣಿಸಿಹುದು
ವಿಶ್ವದೆಲ್ಲ ಭಾವತತಿಯ;
ಬಣಗುವಾತು, ಕಠಿನ ಭಾವ ಕಾಣೆನದರೊಳು;—
ಸರಳ ಭಾಷೆ–ಸುಗಮ ಕವಿತೆ–ತಿಳಿಯಲದರೊಳು.

ಎಲ್ಲಿಯವನ ಸೊಗಸು, ಎಲ್ಲಿ
ದಯೆಯ ಸೋನೆ, ಎಲ್ಲಿ ಕುಶಲ-
ಕರ್ಮವಲ್ಲಿಯವನ ಕವಿತೆ ತೋರಿಬರುವುದು;—
ಭಾಷೆ ಬರದ ಮಗುವು ತಿಳಿವ ತೆರದಿ ಇರುವುದು.

# ಗಿಳಿವಿಂಡಿಗೆ*

೧

ಕವಿಯ ಭಾವವರಳಿಕೊಂಡು
ಭುವಿಗೆ ಸಾರಗಂಧ ಕೊಡಲು
ಸವಿಯನುಂಬ ದುಂಬಿ ಹಾರಿ ರಸವನೀಂಟಿತು;
ಭಾವದಿಂದ ಭಾವಗಳಿಗೆ
ಅತಿಥಿಯಾಗಿ ಸೇರಿಕೊಂಡು
ರಸವನೀಂಟಿ ರಸವ ರುಚಿಸಿ ದುಂಬಿ ಹಾಡಿತು.

೨

ಕವಿತೆಯಗಲ ಬಾನಿನಲ್ಲಿ
ಅಲ್ಲಿ ಇಲ್ಲಿ ರೆಕ್ಕೆ ಬಿಡಿಸಿ
ಮೊಗವದೋರಿ ಇನಿತು ಹಾಡಿ ತಡೆದು ಹಾರಿತು;
ವಿಮಲ ಕಂಠಗಾನದಿಂದೆ,
ಪೂತ ಶಬ್ದದಿಂಪಿನಿಂದೆ,
ಕವಿಯೆ, ನಿನ್ನ ಗಿಳಿಯವಿಂಡು ಪಯಣಬೆಳೆಸಿತು.

೩

ಹಿಂಡು ಬಳೆದು ಪಯಣ ಬೆಳೆಸಿ
ತೋಟದಿಂದ ತೋಟಗಳಿಗೆ,
ಗೀತ ಪಾಡಿ ನಲ್ಮೆ ಬೀರಿ ಉಬ್ಬಿ ಹಾರಲಿ.
ಹೂವನಾಂತ ಗಿಡವು ಬಳ್ಳಿ
ಗೀತದಮೃತಧಾರೆಯಲ್ಲಿ
ಪುಳಕವಾಂತು ಇಳೆಗೆ ನಿನ್ನ ನನ್ನಿ ಸಾರಲಿ.

---

*ಶ್ರೀ. ಎಮ್. ಗೋವಿಂದ ಪೈಯವರ 'ಗಿಳಿವಿಂಡು' ಎಂಬ ಕವಿತಾಸಂಗ್ರಹವನ್ನುದ್ದೇಶಿಸಿ.

## ಸಾಗರದ ಮೇರೆಯಲ್ಲಿ

**ಸಾ**ಗರದ ಮೇರೆಯಿದು, ಘೂರ್ಣಿಸುವ ಸಾಗರದ ಮೇರೆ,
ಆದ್ಯಂತವಿಲ್ಲದೆಯೆ ಮುಂಬರಿವ ಓಜಸಿನ ಮೇರೆ!
ಬ್ರಹ್ಮಾಂಡವನು ಸುತ್ತರಿದು ಪೃಥ್ವಿಗಾಧಾರವಾಗಿ
ಭೋರ್ಗರೆದು ಹರಿವ ನಿಯಮಾಂಕುಶದ ಸಾಗರದ ಮೇರೆ!

ಶೈಲಗಳ ಕಲ್ಲುಗಳು ಸವೆಸವೆದು ಬಂದು,
ಜೀವನದ ಕೋಡಿಯಲಿ ಇಳಿದಿಳಿದು ಬಂದು,
ಪಾವನದ ರೂಪದಲಿ ಮರಳೆಂದು ತೋರ್ದು,
ಎದೆಗೊಟ್ಟು ಒಟ್ಟಾಗಿ ದಡವಾಗಿ ನಿಂದು
ಘೂರ್ಣಿಸುವ ಸಾಗರಕೆ
ಮುಂಬರಿವ ಓಜಸಿಗೆ
ಮೇರೆಯನು ಕಲ್ಪಿಸುತ ನಿಂತಿಹುದು ಬಂದು,
ಸೃಷ್ಟಿಯನು ರಕ್ಷಿಸುತ ನಿಂತಿಹುದು ಇಂದು.

'ಆಪೂರ್ಯಮಾಣಮಚಲಪ್ರತಿಷ್ಠ'ವಿಾ ಶರಧಿಯೊಳು—
ಶಾಂತಿಯೊಳಗಂತಃಪ್ರವಾಹವನ್ನುಳ್ಳ ಶರಧಿಯೊಳು—
ಜೀವನದ ನುಗ್ಗಾಟದಲಿ ಹರಿದುಬಂದೆಷ್ಟು ಹೊನಲು
ಬೀಳುತಿವೆ, ನಾಮರೂಪಂಗಳೆಲ್ಲವನಳಿಸಿಕೊಂಡು!

ಕಡಲಿಂದ ಬಿಸಿಯಾಗಿ ಮೇಲೇರಿ ಹಾರಿ,
ದೂರದಲಿ ಮಳೆಯಾಗಿ ಬಿತ್ತರಿಸಿ ಮಿಾರಿ,
ಸೃಷ್ಟಿಯನು ಚೇತರಿಪ ಸೇವೆಯನು ಮಾಡಿ,
ಪಾವನದ ಶಾಶ್ವತದ ಪದವನ್ನು ಸ್ಮರಿಸಿ,
ಸಾಗರದ ಓಜಸಿಗೆ—
ಶಾಂತಿಮಯ ಸಾಗರಕೆ
ವಿನಯದಲಿ ಬದುಕಿಟ್ಟು ಹರಿಯುತಿವೆ ಹೊನಲು,
ಶಾಶ್ವತದಿ ಮನವಿಟ್ಟು ನುಗ್ಗುತಿವೆ ಮುಂದು.

# ಬಯಲಿನ ಸೊಬಗು

ನಮ್ಮೂರ ಪರ್ವತದ ಕಾಲ್ಬುಡದ ಬಯಲು,
ತರತರದ ಹೂವಿಂದ, ಹುಲ್ಲಿಂದ ಹೊಳೆದು
ಶೋಭಿಸುತ, ಹೊಳೆದಡದ ಮೆಲ್ವಾಸಿಗಿಳಿದು-
ಬಂದಿಹುದು ಮರಗಿಡದ ನೆರಳಿನಲಿ ನಡೆದು.

ಮರಗಿಡದ ಕೊಂಬೆಗಳು ಬಳಿಬಳಿಗೆ ಸೇರ್ದು,
ತಳಿರಿಂದ ತಳಿರಿಂಗೆ ನೆರಳನ್ನು ಬಿಗಿದು,
ವಿನಯದಲಿ ತೂಗುತಿಹ ರೆಂಬೆಗಳಲಿಳಿಸಿ
ಕೊಡುತಿಹವು ಹೂದಳಿರ ಗಂಧವನು ಹರಸಿ.

ಮರಗಿಡದ ರೆಂಬೆಗಳು ಮುಂದಕ್ಕೆ ನೆಗೆದು
ನೆರಳಿತ್ತ ತಾಣದಲಿ ಹರಿಯುವುದು ಹೊಳೆಯು;
ತೀರದಲಿ ಮೆರೆಯುವುದು ಮೆಲ್ವಾಸ ಬಯಲು,
ನಮ್ಮೂರ ಪರ್ವತದ ಕಾಲ್ಬುಡದ ಧನವು.

ಮಳೆಯಲ್ಲಿ ಮೈದುಂಬಿ ಮೆರೆಯುತಿಹ ಹೊಳೆಗೆ,
ನೆರೆಯೆಂದು ನೊರೆಯೆಂದು ನೆಗೆಯುತಿಹ ನಡೆಗೆ,
ಝುರಿಯೆಂದು ತೊರೆಯೆಂದು ಹರಿಯುತಿಹ ನದಿಗೆ,
ಈ ಬಯಲು ಕೆಳಗಿಳಿದು ಕೂಡುವುದು ಕಡೆಗೆ.

ಬಯಲಿನಲಿ ಹುಲುಸಾಗಿ ಬೆಳೆದಿರುವ ಹುಲ್ಲು
ನೆಳಲಂತೆ ಸುಳಿಸುಳಿವ ಜನಕೆಲ್ಲ ಹಾಸು;
ಬಯಲಿನಲಿ ನೆಗೆದಿರುವ ತರತರದ ಹೂವು
ಮುಗಿಲಂತೆ ತಡೆತಡೆವ ರಸಿಕರ್ಗೆ ಚೆನ್ನು.

ಬಹುದೂರದಿಂದಾಗಿ ನಡೆನಡೆದು ಬಂದು
ವಿಶ್ರಾಂತಿಗಾಗಿಲ್ಲಿ ಈ ಹೊಳೆಯು ಸೇರ್ದು,
ನಮ್ಮೂರ ಪರ್ವತದ ಕಾಲ್ಬುಡವ ತೊಳೆದು,
ಸುಳಿಸುಳಿದು ಬಳೆಬಳೆದು ಹರಿಯುವುದು ಸುತ್ತು.

ಈ ತೊರೆಯ ದಾಟುತ್ತ ಅದರಾಚೆ ಪಡೆದು
ಹಗಲೆಲ್ಲ ಮೇಯುವುವು ಹಸುಮೇಕೆ ತಡೆದು;
ಆಗಲ್ಲಿ ಬಳಿ ನಿಂತ ತಾವರೆಯ ಬಳ್ಳಿ
ಗೋವಳನ ನಲಿಸುವುದು ಬರಿ ಮಂಕು ಹಚ್ಚಿ.

ತಾವರೆಗೆ ತಳವೆಟಕಿಬಾರದಿಹ ತಾಣಂ
ಅಲ್ಲೊಂದು ಇರುತಿಹುದು, ಗಾಂಭೀರ್ಯದಾಣ್ಮಂ;
ಮತ್ತಲ್ಲಿ ಶುಕಪಿಕದ ಗಂಭೀರ ಗಾನಂ
ಕೇಳುವುದು, ನೀರವದ ಸಂತೋಷಸಾರಂ.

ದಣಿವಾಂತ ಮರಿಹುಲ್ಲೆ—ಬಳಕುತಿಹ ದೇಹ,
ಹೆದರಿರುವ ಮೃಗಜಾತಿ, ಚಂಚಲದ ನೇತ್ರ—
ಮೋರೆಯನು ನೀರೊಳಗೆ ಇಳಿಬಿಟ್ಟು ಮೆಲ್ಲ,
ಬಾಯ್ತಣಿಸಿಕೊಳ್ಳುವುದು ಬಂದು ಹಗಲೆಲ್ಲ.

ದೂರದಲಿ ಬೆಟ್ಟಗಳ ಬಿತ್ತರದ ಛಾಯೆ
ಕೆಳನಿಂತ ಗುಡ್ಡಗಳ ಮೇಲಕ್ಕೆ ಹರಿಯೆ,
ತೋರದಿಹ ಮೇಘಗಳ ಶಾಶ್ವತದ ನೆರಳೇ?—
ಎಂದೆಂಬ ಭ್ರಾಂತಿಯನು ಕಟ್ಟುವುದು ಮನಕೆ.

ದೂರದಲಿ ತೋರುವುದು ಬೆಟ್ಟಗಳ ಸಾಲು
ಆಗಸಕೆ ಬಣ್ಣದಲಿ ಸರಿಸಾಟಿ ನಿಂತು;
ದಪ್ಪನಿಹ ರೇಖೆಯಲಿ ಭಿನ್ನತೆಯ ಪಡೆದು
ಶಾಶ್ವತದ ಮುಗಿಲಂತೆ ನಿಂತಿಹುದು ನೆಗೆದು.

ಈ ಬಯಲ ನಡುವಿಂದ ಗುಡ್ಡಗಳ ಮೋರೆ,
ಮತ್ತಿದರ ಬದಿಯಿಂದ ಕಿರಿಹೊಳೆಯ ಶೋಭೆ,
ಇವುಗಳನು ಕಾಂಬವರ ತೋಷದಾ ಸೋಗೆ
ಮೂಡಿಹುದು ಕವಿಹೃದಯ ಜಗದಾತ್ಮದಲ್ಲೆ.

# ಈ ದಾರಿ

ಈ ದಾರಿ ತುಂಬುಪೊಳೆದಂಡೆಯಲಿ ಹೊಳೆದು
ಬಿತ್ತರದ ಪುಲಿನದಲಿ ಸಾಗುತಿದೆ ಬೆಳೆದು;
ಹೊಳೆದಡದ ತೇವದಲಿ ಮುಳಲೆಲ್ಲ ನನೆದು
ಮೇಲೆದ್ದು ಹೆಗಲಿತ್ತು ನಿಂತಂತೆ ಇಹುದು.

ಈ ದಾರಿ ಹೊಸತಿಲ್ಲ—ಇದು ಕುಸಿಯಲಿಲ್ಲ.
ಮೆಲ್‌ಮುಳಲು ಹಾಸಿಹುದು ಬಹಳುದ್ದದಲ್ಲಿ;
ರಕ್ಷಕರ ಬೆಳಕಿದ್ದು ಸುಲಿಗೆಯುವರಿಲ್ಲ;
ಎಲ್ಲೆಲ್ಲಿ ನೋಡಿದರು ತೋರುವುದು ಹೊಸತು.

ಹಳೆಹಾದಿಚರಿತೆಗಳು ಕಾಲದಲೆಯಲ್ಲಿ
ಸೆರೆಸೇರುತಿಳಿದಿಹವು ತೊರೆನೀರಿನಲ್ಲಿ.
ಹಳೆದಾರಿಕಟ್ಟಡದ ಪಂಚಾಂಗವೆಲ್ಲ
ಹೂತಿಹುದು ಹಾದಿಯಡಿ ನೆಲದಗಲದಲ್ಲಿ.

ಅಡಗಿಹರು ವೈಭವದ ನೃಪರೆಲ್ಲರಲ್ಲಿ
ಸಾವಿನಲಿ ಮೊಗವೆತ್ತಿ ಕಾಣಲದ ನಾಚಿ.
ನೀನೇಕೆ ಮೆಲ್ಲಡಿಯ ನಡೆಯನ್ನು ನಡೆವೆ?—
ಈ ನೃಪರ ಹಂಗೇನು ನಿನಗಿನ್ನು ಮರುಳೆ?

ಪೂರ್ವದಲಿ ಜನತೆಯಾ ಬೆನ್ನುಗಳ ಮೇಲೆ
ಸೈನಿಕರ ಪಡೆಯನ್ನು ನಡೆಸಿಹರು ಇವರು—
ತಿನಿಸಿತ್ತು ರಕ್ಷಿಸುವ ನೆವದಿಂದ ನಿನ್ನ
ಬಾಯಿಂದ ತಿನಿಸ ಹೊರಗೆಳೆದುಬಿಟ್ಟಿಹರು.

ಅಧಿಕಾರದರ್ಪಗಳ ಗೋರಿಗಳು ಕೆಳಗೆ;
ಸ್ವಾತಂತ್ರ್ಯಸಮತೆಗಳ ತಿಳಿಬಾನು ಮೇಲೆ.
ಗೋರಿಗಳ ತುಳಿಯುತ್ತ, ಸಮತೆಯಲಿ ಮೆರೆದು
ನೀ ನಿನ್ನ ಪಯಣವನು ಬೆಳೆಸುತಿರು ನಲಿದು.

ಹಾಡುಗಳ ಹಾಡುತಲಿ ಸಾಗುವನು ಕವಿಯು;
ಹಾಳಾದ ಆಳಿಂದು ಆಳುವನು ಕಲಿತು.
ಹಕ್ಕಿಗಳು ಚಿಲಿಪಿಲಿಯ ಗೀತವನು ಪಾಡಿ
ಪ್ರೇಮದೊಂದಿರವನ್ನು ಬಿಗಿಯುವವು ಕೂಡಿ.

ಈ ದಾರಿ ಹೊಸತಿಲ್ಲಿ ಹಳೆ ಜನರ ಕಾಣೆ;
ಹೊಸ ಜನರು ನಡೆಯುವರು ಹೊಸ ಭಾವದಲ್ಲಿ.
ಕರ್ತವ್ಯದಕ್ಷತೆಯ ಹಳೆ ಜನರ ಎಲುಬು
ಹೊಸ ದಾರಿಗಿತ್ತಿಹುದು ನೂರಾರು ಮಳಲು.

ಮೃತ್ಯುವಿನ ತೀರದಲಿ ಜೀವನದ ಹಾದಿ
ಸಾಗುತಿದೆ ಸಪ್ರೇಮಕ್ರಮುವನ್ನು ಹಿಡಿದು;
ಅಂದಂದು ಮೃತ್ಯುವಿನ ವೀಚಿಗಳು ಬಂದು
ಅಳಿಸುವವು ನರನಾರಿದರ್ಪಗಳ ರೂಪು.

# ಭಿಕ್ಷಾಪಾತ್ರೆ

ಪಾವನ ಗಂಗೆಯ ಬಿತ್ತರ ಬಯಲಲಿ
ಊರಿಂದೂರಿಗೆ ಪಯಣವು ಬೆಳೆಯೆ,
ನಾಡಿನ ರಾಜಗೆ, ಕಾಡಿನ ಕಳ್ಳಗೆ
ಬೆದರದೆ "ಭಿಕ್ಷಾಂ ದೇಹಿ"ಯನೊರೆದೆ.

ಊರಿನ ನೀರವ ಮಹಲಿನ ಅಡಿಯಲಿ,
ಹಳ್ಳಿಯ ಬಡವರ ಗುಡಿಸಲ ಬಳಿಯಲಿ,
ಸಿಂಗರ ತೋಟದ ಲತೆಗಳ ಬದಿಯಲಿ,
ಭೀಕರದಡವಿಯ ಮರಗಳ ನೆಳಲಲಿ,
ಕರಗಳ ತೂಗುಂದೊಟ್ಟಿಲ ನೆಲದಲಿ,
ನಲಿಯುತ ಹೆಸರನು ನೀ ಪಡೆದೆ.

ಗೌತಮನು ಯಾಚಿಸುತ ಮುಂದೆಸೆದ ಪಾತ್ರವಿದು,
ಗೌತಮನ ಭಿಕ್ಷೆಯನು ಹೊತ್ತಿರುವ ಪಾತ್ರೆ;
ಹಿಂಜರಿವ ಕೊಡುಗೈಗೆ ಬ್ರಹ್ಮಾಂಡವಿವರವಿದು,
ತುಂಬುವುದು ಬಡತನದ ನಾಲ್ಕೈದು ಯವೆಗೆ.

ತೂಗುವ ಭರದಲಿ ಜಗವನು ಮರೆತು,
ಮರವೆಯ ಗಬ್ಬದಿ ಜಗವನು ಹೊತ್ತು,
ಧರಣಿಯ ಸೊಗದಲಿ ಆಸೆಯ ನೀಗಿ,
ಮನುಜನ ಮೋಕ್ಷದೆ ಮನಸನು ಮಾಡಿ
ನಡೆದನು ಬುದ್ಧನು ಮುನಿಯಾಗಿ.

ಈ ಪಾತ್ರೆಯೊಡಲಿಂದ ಹಸಿ ಹಸುರು ಹುಲ್ಲ
ಗೌತಮನು ಬಳಿಬಂದ ಮರಿಹುಲ್ಲೆಗುಣಿಸಿ,
ತೆಗೆತೆಗೆದು ತಿರಿತಿರಿಗಿ ಕರೆಯುತ್ತ ತಿನಿಸಿ
ಅದರೊಡನೆ ಬೇಡಿದನು ನಲ್ಮೆಗಳ ಭಿಕ್ಷೆ.

ತ್ಯಜಿಸುತ್ತ ಸಿರಿತನವ ಬಡತನವನಾಂತು,
ವೇದವೇದಾಂತಗಳ ಮರ್ಮವನು ತಿಳಿದು
ಹೊಸ ಮನವ ಭಾರತದ ಭುವಿಯಲ್ಲಿ ನೆಟ್ಟು,
ಧರ್ಮಗಳ ಪೆಸರಿನಲಿ ದೈವಗಳಿಗಾಗಿ
ಹರಿಯುತಿಹ ರುಧಿರಗಳ ಹೊನಲನ್ನು ತಡೆದು
ಕರುಣೆಯನು ಒಸರುತಿಹ ಒರತೆಯನು ಮಾಡಿ,
ಹರಿಯದಿಹ ಕಾಲನಿಗೆ ಚೋದನೆಯ ಕೊಟ್ಟು
ರಕ್ಷಿಸಿದ ಗೌತಮನ ಒಡನಾಡಿಯಾದೆ.

ಕಳೆಯಿತು ಕಾಲವು; ಬೆಳೆಯಿತು ಸೃಷ್ಟಿಯು—
ಸಿಡಿಯಿತು ಲೋಕದ ನೆಲೆಗಟ್ಟು.
ಕಳೆಯದ ಕಾಲಕೆ, ಬೆಳೆಯದ ಸೃಷ್ಟಿಗೆ,
ಕರುಣೆಯೆ ನಿಲ್ಲಲಿ ನೆಲೆಗಟ್ಟು.

ಶಾಂತಿಯ ಕಂಗಳ ಮೆಲ್ಲನೆ ಮುಚ್ಚಿ,
ಮುಚ್ಚಿದ ಕಣ್ಣನು ಬಳಿಕದೆ ತೆರೆದು,
ಅಭಯದ ಕೈಯನು ಮೇಲಕೆ ನೆಗಹಿ,
ಗಾಳಿಯ ಬಲೆಯನು ಮೆಲ್ಲನೆ ಹೆಣೆದು,
ಬಿಣ್ಪಿನ ಕಾಲನು ಮುಂದಕೆ ನೀಡಿ,
ನಡೆಯುವ ಮುಂಚೆಯೆ ನೆಲವನು ಅಳೆದು,—
ಕಂಗಳ ಸೆರೆಯಲಿ ಮಲಗಿದ ಶಾಂತಿ,
ಕೈಗಳ ಬಲೆಯಲಿ ಸಿಲುಕಿದ ಶಕ್ತಿ,
ಕಾಲ್ಗಳ ನಡೆಯಲಿ ತೋರುವ ನವತೆ—
ಇವುಗಳ ಜನತೆಗೆ ತೋರಿಸಿ ಮುಂದೆ
ನಡೆಯುವ ಬುದ್ಧನ ಸಹಚರನಾದೆ.

# ನಡೆವ ನೆರಳು

ನಾಡಿನ ನಾಡಿನ ನರಗಳ ತಿರುವಿ,
ಬಿಸಿಬಿಸಿ ನೆತ್ತರ ಕೋಡಿಯ ಸುರಿಸಿ,
ತಾನೂ ಕುಡಿಯದೆ, ನೀರವಳಾಗಿ
ಮರಳಿನ ಕಾಡೊಳು ನಡೆನಡೆದೆಲ್ಲಿ
ಹೋಗುವೆ, ಹೋಗುವೆ ನೀನೆಲ್ಲಿ?

ಮರಳಿನ ಕಾಡೊಳು ಮೆರೆವುದು ಸರವು,
ನಿನ್ನಯ ಹಿಂದಕೆ ನೆತ್ತರ ಸರವು.
ಮುಂದಕೆ ಮುಂದಕೆ ನೋಡುವಿಯೇನು?
ಹಿಂದಕೆ ಹಿಂದಕೆ ನೋಡಿದಿಯೇನು?
ನಡೆಯುವ ನೆರಳೇ, ನೀ ನಿಲ್ಲು.

ನಡೆಯುವ ನೆರಳೇ, ನೀ ನಡೆದಾಯ್ತೆ?
ಮರಳಿನ ಗಡಿಯನು ನೀ ಪಡೆದಾಯ್ತೆ?
ಮರಳಿನ ಕಾಡೊಳು ನೆಲ ತಂಪಾಯ್ತೆ?
ನೆತ್ತರ ಕೆರೆಯೊಳು ಕಮಲಗಳಾಯ್ತೆ?
ನಡೆಯುವ ನೆರಳೇ, ನಿಂತಿಹೆಯ?

ಕಮಲದ ನೆರಳೊಳು ಕಣ್ಣನು ಮುಚ್ಚಿ
ಅಂಜೆಯು ಮೆರೆವುದು ಬಗೆಯನು ಬಿಚ್ಚಿ.
ನಡೆಯುವ ನೆರಳಿನ ಮುಗಿಯದ ನಡೆಯು
ಮುಗಿಯುತ ಬಂದಿತು. ಈ ನಡೆಯಾಯ್ತು.
ನಡೆಯದ ಮನುಜಗೆ ಬಿಡುವಾಯ್ತು.

# ಈ ನನ್ನ ಲತೆ

**ಜ**ನರುಲಿವ ಮಾತಿಲ್ಲ; ಜನರಿಡುವ ಅಡಿಯಿಲ್ಲ;
ಧನಕನಕ ಪಸರಿಸುವ ಮೋಹಗಳ ಜಾಲವಿಲ್ಲಿಲ್ಲ.
ಮನವೊಂದು ನಿರ್ದುಷ್ಟ ಗಮನದಲಿ ಬಂದಿಲ್ಲಿ
ಇನಿತಿನಿತು ಸಂಚರಿಸಿ ಮರಳುವುದು ದಿನಕೊಂದು ಬಾರಿ.

ಬಿತ್ತರದ ತಾಣವಿದು—ಬೆಳೆಯುತಿಹ ಮರಗಿಡವು,
ಸುತ್ತುತಿಹ ಬಳ್ಳಿಗಳು, ಹರಡುತಿಹ ಹುಲ್ಲುಪೊದರುಗಳು
ತಂತಮ್ಮ ಹೂದಳಿರುಹೀಚುಗಳ ಬಳಗವನು
ಕತ್ತುರಿಯ ನೇಹದಲಿ ಮೋಹಿಸುತ ಬಾಳಿ ಬದುಕಿಹವು.

ಈ ಲತೆಯು ನವಕುಸುಮಕೋಮಲದ ಮೈಯಿಂದ
ನಲ್ಲನನು ಬಿಗಿದಪ್ಪಿ, ಮೈಗೊಂಡು ಬಂದ ಯೌವನಕೆ
ದಾಳಿಯಲಿ ಬಂದಿದ್ದ ನುಣ್ದುಟಿಯ ಪುಷ್ಪದಲಿ
ಬಾಳುವೆಯ ನಲ್ಮೆಯನು ಲೀಲೆಯಿಂದಲಿ ತೋರುತಿಹಳು.

ಮೈಗೊಂಡ ಯೌವನದ ಬಾಳ್ಗವಿಯ ಒಡಲಲ್ಲಿ
ತೂಗುತಿಹ ಸವಿಗನಸ ರಾಜ್ಯದೊಳಗೋಲಾಡಿಕೊಂಡು,
ಹಿಗ್ಗುತಿಹ ಮನದಿಂದ, ಮುಗ್ಗುತಿಹ ಕಾಲಿಂದ,
ಬಗ್ಗುತಿಹ ಕವಲಿಂದ ಕುಣಿಕುಣಿದು ಬಳಿಕ ಸುಖಿಸುವಳು.

ಶೈಶವವು ಜವ್ವನಕೆ ಮಾರ್ಪಟ್ಟುಬಂದಿದ್ದು,
ಬೀಸುತಿಹ ಪರಿಮಳದ ತಂಗಾಳಿಗೊಡಲನ್ನು ಬಿಟ್ಟು,
ಸಂಸಾರ ಮರೆತೊಮ್ಮೆ, ಮಬ್ಬಿನಲಿ ತೂಗುತಿಹ
ಸಾಸಿರದ ಚುಕ್ಕಿಗಳ ಕಂಡೊಮ್ಮೆ ನಾಚಿ ಬಳುಕುವಳು.

ಜೀವನದ ಸೊಗಸಿನಲಿ ದುಗುಡವನು ಕಂಡಿರದ
ತಾವರೆಯ ಹೃದಯದಲಿ ರಸವೀಂಟಿಬಂದಿರುವ ತುಂಬಿ
ಪಾವನದ ಝೇಂಕಾರ ಮಾಡುತ್ತ ತಾನಿಲ್ಲಿ
ಕೈವಲ್ಯಪ್ರೇಮವನು ಸೂಸುವುದು ಹೂಗಳನು ಮುತ್ತಿ.

ತುಂಬಿಗಳ ಝೇಂಕಾರಗಾಯನದ ಉಸಿರಿನಲಿ
ಕಂಬನಿಯ ಬಿಂದುವನು ಕೆಳಸುರಿಸಿ ತೊನೆದಾಡಿಕೊಂಡು,
ನಂಬಿಗೆಯ ಗೆಳೆಯರ್ಗೆ, ನಚ್ಚಿನಾ ರಸಿಕರ್ಗೆ
ಸಂಭ್ರಮದಿ ಸ್ವಾಗತವನಿತ್ತು ನೆನೆಯುವಳು ನೆನೆಯುವಳು.

ಝೇಂಕರಿಪ ತುಂಬಿಗಳ ಗಾಯನಕೆ ತಾನದಲಿ
ಆ ಕೈಯನಾಕಡೆಗೆ, ಈ ಕೈಯನೀಕಡೆಗೆ ನೆಗಹಿ,
ಆಕಾರದಲಿ ಬಳುಕಿ, ಲಾಸ್ಯದಲಿ ಕುಣಿಕುಣಿದು,
ಸಿಕ್ಕಿನಲಿ ನೆನೆದಂತೆ ನಿಂತೆದ್ದು ಮನದೆ ನಾಚುವಳು.

ತುಂಬಿಗಳ ಗಾಯನಕೆ ಮನಸೋತ ಈ ಬಳ್ಳಿ,
ಕಂಬನಿಯ ರಸದಿಂದ ನಯವಾಂತ ಪಲ್ಲವಾಧರದಿ
ಸಂಭ್ರಮದೆ ವೈಭವದ ಮುಗುಳನ್ನು ಫುಲ್ಲಿಸುತ,
ಶಂಭುವಿನ ಪಾವನದ ಚರಣಗಳ ವಂದಿಪಳು ಬಾಗಿ.

ಮಾಗಿಯಲಿ ಬಡವಾಂತು, ಸುಗ್ಗಿಯಲಿ ಮೈಯಾಂತು,
ಹಾಗಿರದ ಹೀಗಿರದ ಸೌಭಾಗ್ಯಮಾಂಗಲ್ಯವಾಂತು,
ಮೊಗ್ಗೆಯಲಿ ಹುದುಗಿಟ್ಟ ಸಿಂಗರದ ಚೆಲುವಾಂತು,
ಭಾಗ್ಯದಲಿ ಬಾಳುತಿಹಳೀ ಲತೆಯು ಮುಗುದತನವಾಂತು.

ಜನರುಲಿವ ಮಾತಿಲ್ಲ; ಜನರಿಡುವ ಅಡಿಯಿಲ್ಲ;
ಧನಕನಕ ಪಸರಿಸುವ ಮೋಹಗಳ ಜಾಲವಿಲ್ಲಿಲ್ಲ.
ಮಸವೊಂದು ನಿರ್ದುಷ್ಟ ಗಮನದಲಿ ಬಂದಿಲ್ಲಿ
ಇನಿತಿನಿತು ಸಂಚರಿಸಿ ಮರಳುವುದು ದಿನಕೊಂದು ಬಾರಿ.

# ಕುಡುಕು

ಮುಗಿಲುಗಳ ತೆಳುಮರೆಯ ಹಿಂಬದಿಯ ತಿಂಗಳ್
ಮರೆಯನ್ನು ತೊರೆಯುವನು ಮುಗಿಲತ್ತ ಸಾಗಲ್;
ಮರೆದೆರೆದು ಪೆರೆದೋರಿ ನಗುತೊಡನೆ ಕವಿಯ
ಮುಂದೆರಳಿ ಕರೆಯುವನು ಅವನೊಂದು ಸವಿಯ.

ಮರೆ ಬಿಸುಟ ತಿಂಗಳನು ನಗುತಿಹನು ಮೇಲೆ;
ಮರೆಯಿರದ ಕವಿಯೊಬ್ಬ ನಲಿಯುವನು ಕೆಳಗೆ.
ಬಾನ್ನೆಲದ ರಸಿಕರೀ ಮೇಲಾಟದಿಂದ
ಒಡಲನ್ನು ಬಳುಕುತ್ತ ನಡುಗುತಿಹಳಿರುಳು.

ಬಾನಲ್ಲಿ ನೆಲದಲ್ಲಿ ಸೊಲ್ಲಿಲ್ಲದಂದು,
ಕಣ್ಣಲ್ಲಿ ಮನದಲ್ಲಿ ಚೆಲುವಿಳಿಯುವಂದು,
ಬಗೆಯಲ್ಲಿ ನಲ್ಮೆಪೊದೆ ತಲೆದೂಗುವಂದು
ರಸವೆಲ್ಲ ಮರೆಸುವದು ಮರೆಮೋಸವನ್ನು.

ಇರುಳಿನಾ ಸೆರಗಿನಲಿ ಮಕ್ಕಳುರೆ ಮಲಗಿ
ಕನಸಿನಲಿ ಮಿಂಚುವವು ಕುಡಿನಗೆಯ ಹರಡಿ;
ಜನನಿಯಾ ಸೆರಗೊಂದು ಹಾಸಿಹುದು ಮೇಲೆ;
ಕನಸಿನಾ ಬಲೆಯೊಂದು ಹೆಣೆದಿಹುದು ಕೆಳಗೆ.

ನಟ್ಟಿರುಳ ಶಾಂತಿಯಲಿ ಕಾಳ್ಪುರದ ಸಪ್ಪಳವು
ಗಾಂಭೀರ್ಯದಿರವನ್ನು ವ್ಯಂಜಿಸಿರುತಿಹುದು;
ಚುಕ್ಕಿಗಳ ಕಾಂತಿಯಲಿ ನಂಬಿಗೆಯ ಸಿರಿಯನ್ನು
ಹುಟ್ಟಿಸಿದೆ ನೈರಾಶ್ಯದೇಕಾಂತದಿರವು.

ದೂರದಲಿ ಕಾಣುತಿದೆ ಕಿರುಸೊಡರಿನಿಂದ
ದೆಸೆಗೆಟ್ಟ ಗುಡಿಸಲೊಳು ಹಿಂಜರಿವ ಜೊನ್ನ;
ಹರಡಿರುವ ಜೊನ್ನದಲಿ ಕೆಂಜೊಡರನಿರಿಸಿ
ಬಿತ್ತರಿಪ ಜೊನ್ನಕ್ಕೆ ಕದತಡೆಯನಿಹರೆ?

ಗುಡಿಸಲೊಳು ಕಿರುಸೊಡರ ನಸುಬೆಳಕ ಕತ್ತಲೊಳು
ಮಡದಿಯಾ ತೋಳನ್ನು ಪಿಡಿದೆಳೆದು, ಬಳಿಕ
ಬಾಹುವಿನ ದೂರದಲಿ ಅವಳನ್ನು ಕೆಡೆದು
ಗದರಿಪನು, 'ನಾಲ್ಕಾಣೆ ತೆಗೆದೆ'ಂದು ನಲ್ಲ.

ಮೆಲ್ನುಡಿಯ ಕಾಳ್ಪುರದ ಸಪ್ಪಳವು ವನದೆ
ಗಂಭೀರ ಘನದಂತೆ ಹೊಡೆಯುವ್ವದು ಮನಕೆ;
'ನಾಲ್ಕಾಣೆ ನಾ ಕಾಣೆ'ಯೆಂಬುದಿದು ಗುಡುಗು
ಗುಡುಗಾಡಿ ನಾಲ್ದೆಸೆಗೆ ನಿಂತಿರುವ ಕುಡುಕು.

ಮರುನುಡಿಗಳೆದೆತನವು ಮುಂದಕ್ಕೆ ಬರದೆ
ಪಿಡಿಯುತ್ತ ಬಿರುನುಡಿಯು ಶಾಂತಿಯನು ಸೀಳೆ,
ಬಿರುನುಡಿಯ ಪಡಿದನಿಗೆ ಪಡಿದನಿಯು ಬೇರೆ
ಹುಟ್ಟಲದು ಶಾಂತಿಗತಿಭೀಕರದ ಮಾಲೆ.

ಕುಡುಕತನ ದೆವ್ವನಿಗೆ ಇವನೊಂದು ಬಲಿಯು,
ಪೌರುಷವು ಹಾಳಾಗಿ ಬೆಳೆದಿರುವ ಕಲಿಯು.
ಇವಗೊಂದು ಹೆಂಡತಿಯು ಇರುತಿಹಳು, ಅವಳು
ತಾಳಿದಾ ತಾಳ್ಮೆ ಪಿಡಿದೊಗೆದೊಂದು ಮರಳು.

"ಹಾ, ಮೊನ್ನೆ ರಘುರಾಮ ಸಾಲೆಯನು ಬಿಟ್ಟು
ಮರಳುತಿಹ ವೇಳೆಯಲಿ ಬಾಲಕರು ನಿಂತು
ಸೆಣಸಿದರು ನೋಡುತ್ತ ಅವನುಟ್ಟ ಬೊಂತೆ;
ಮನವಿರಿವ ನೋಟವನು ನಾ ನೋಡಿ ನಿಂತೆ.

"ಆಹೊತ್ತಿನಿಂದಿತ್ತ ಪೈಗೊಂದು ಕಾಸು
ಕೂಡಿಟ್ಟೆ ರಘುರಾಮಗೊಂದಂಗಿ ತೊಡಲು;
ಹೊಲಿಗೆಯಾ ಕೂಲಿಯನು ಕೊಡದೆಂಟು ಕಾಸು
ಸಿಂಗರದ ಮಗುವನ್ನು ನಾ ನೋಡದಾದೆ.

“ಬಾಲಕರ ಬಾಳುವೆಯು ಕೋಮಲದ ಹೂವು;
ಮುನ್ನೀರಿನಲೆಗಳಾರೈಕದಕೆ ಸಾವು.
ಇಬ್ಬನಿಯ ಸೋನೆಯಲಿ ನಲಿಯುತ್ತ ನಿಂತು
ಬೆಳೆಯುವುದು ಹಗಲಿರುಳು ತಾನಾಗಿ ಹೂವು.”

ನಿಂತಿಹಳು ಹೀಗೆಂದು ನುಡಿದಿರುವ ಮಡದಿ
ಚಳಿಗಾಳಿ ಮಳೆಯಲ್ಲಿ ಲತೆಯಂತೆ ಛಲದಿ.
ತೋಳುಗಳ ಹಿಡಿತವನು ಬಿಸುಡುತ್ತಲವನು
ಹಿಸುಕಿದನು ಮಡದಿಯಾ ಕೊರಳನ್ನು ನೆಗೆದು.

ಉಗುರುಗಳ ಕೊನೆಯಿಂದ ಕೊರಳಲ್ಲಿ ಹೊರಟು
ಬಿಸಿರಕುತ ಉಗುರಿಂಗೆ ತಂಪನ್ನು ಕೊಡಲು,
ತಿಳುವಳಿಕೆ-ಬೆಳಕಿನಲಿ ಹಿಂಜರಿದು ನಿಂತು
ದಿಟ್ಟಿಸುತ, ತಾ ಬೆನ್ನು ತೋರಿಸಿದನವನು.

ನಲ್ಲನಾ ಕೈಯಲ್ಲಿ ಜೀವಿತದ ಗತಿಯ
ಇರಿಸಿದವಳೊಡಲಾಗ ಹಿಂದಕ್ಕೆ ಪತಿಯ
ಮಣಿವಂತೆ ಬಿದ್ದು, ಚಣಗಾಲ ಹಿರಿಹಿಗ್ಗಿ
ಚಿರಕಾಲ ಕಾಣಿಸಿತು ಕೆಡೆದಂತೆ ಕುಗ್ಗಿ.

ಸುಳಿಗಾಳಿ ಸುಳಿದಾಡಿ ಬಿದ್ದವಳ ತಣಿಸಿ,
ನಿದ್ರಿಸುವ ಬಾಲಕರ ಮೇಲ್ ಹಾಯ್ದು ಗಣಿಸಿ,
ಮಿಣಿಮಿಣಿದು ಹೊಳೆಯುತಿಹ ಕಿರುಸೊಡರ ಕುಣಿಸಿ
ಕಟ್ಟಕಡೆ ಹಾರಿಸಿತು ಸೊಡರನ್ನು ದಣಿಸಿ.

ಸುಯ್ಯೆಂಬುದುಸಿರೊಂದು ಕೇಳುತಿದೆ ತಡೆದು;
ಹಾಯೆಂಬುದಳುವೊಂದು ಹೊರಡುತಿದೆ ಹೊಡೆದು:
ಕುಡಿಕನೀ ನೋಟವನು ಮನಸಿನಲಿ ಕಂಡು
ಸೊರಗುತ್ತ ಬಿದ್ದಲ್ಲಿಯೊರಗಿದನು ನೊಂದು.

ಮರಳಿದಾ ಅರಿಮರುಳ ನಲ್ಲನುರೆ ಸೊರಗಿ
ದುಃಖದಲಿ ಅಲ್ಲಿರುವ ಮಂಚದಲಿ ಮಲಗಿ,
ಕೆಳವೊಗದ ಕೈಯೆರಡ ಜೋಲುತ್ತ ಬಿಟ್ಟು
ಮಲಗಿದನು ಮೈಮರೆದು ನೆನೆನೆನೆದು ತಪ್ಪು.

ಕತ್ತಲೆಯ ಮುಸುಕಿನಲಿ ಕುಡಿಕನಾ ಮಡದಿ
ಎಚ್ಚತ್ತು ನೋಡಿದಳು ಬಾಲಕರ ತಟ್ಟಿ.
ಶೀತಲದ ಸ್ಪರ್ಶದಲಿ ಮೈತೆಗೆಯಲವರು
ಚಣಗಾಲ, 'ಹಾ ರಕ್ತ!' ಮೈಮರೆದಳೆಂದು.

ನೆತ್ತಿಯಿಂ ಸುರಿಯುತಿಹ ನೆತ್ತರನು ಮೆಲ್ಲ
ಸೆರಗಿನಾ ಬಿತ್ತರದಿ ಮಾನಿನಿಯು ಹೀರಿ,
'ಬಾಲಕರು ಮಲಗಿಹರು ಈ ಕತೆಯನರಿಯರ್,'
ಎಂದೆಂಬ ತೋಷದಿಂ ಮುನ್ನಡೆದಳವಳು.

ಮುಂದೆರಳಿ ನಲ್ಲನಾ ಚಾಚಿರುವ ಕೈಗೆ
ರಕ್ತದಲಿ ಗಂಧಾನುಲೇಪನವ ಮಾಡಿ,
ಮಿಡಿಯುತಿಹ ಕಂಬನಿಯ ತಂಪನ್ನು ಸುರಿಸಿ
ಶೈತ್ಯೋಪಚಾರಗಳ ನಡೆಸಿದಳು ಮಡದಿ.

ಚೇತನೆಯ ಪಡೆಯುತ್ತ ನಲ್ಲನುರೆ ಮುಂದೆ
ಕುಳಿತಿರುವ ಮಡದಿಯನು ನೋಡುತ್ತ, ಮುಂಚೆ
ಮಿಣಿಮಿಣಿದ ಕೆಚ್ಚನೆಯ ಸೊಡರನ್ನು ನೆನೆದು
ಕಣ್ಣೀರ ಕೋಡಿಯನು ಸುರಿಸಿದನು ನಿಂದು.

ನಲ್ಲನಾ ಕಣ್ಣೀರ ಧಾರೆಯಲಿ ತೊಯ್ದು
ಮಡದಿಯಾ ಉಡುಪಂದು ನೆತ್ತರಿನ ಕೆಂಪು
ತಳೆಯುತ್ತ ತಿರಿಗೊಮ್ಮೆ ತೋರಿದುದು ಶುಭ್ರಂ!—
ನೆತ್ತರಿನ ಕಲೆಯಿಂದ ಶೋಭಿಸಿತು ವಸ್ತ್ರಂ!

# ಕಳೆದ ವಿಜಯದಶಮಿ
## 1935

ಕಳೆದ ಬಾರಿಯ ದಶಮಿ, ವಿಜಯದಶಮಿಯು, ಮುಗಿದು ವರುಷವಾಯ್ತೊಂದು. ಕರ್ಣಾಟಸಾಹಿತ್ಯದಾಚಾರ್ಯರಾಗಮಿಸಿ, ನಮ್ಮೂರ ಬಡತನದ ಆತಿಥ್ಯವನು ಕೈಗೊಂಡು ಸಂತುಷ್ಟರಾಗಿ ತೆರಳಿಂದು ವತ್ಸರವು ಮರೆಯಾಯ್ತು. ತುಳುನಾಡ ಸಂಸ್ಕೃತಿಯ ಕರ್ಣಾಟದೊಲುಮೆಯನು, ಮತ್ತಲ್ಲಿ ಕೊಂಕಣದ ಸತ್ಪುತ್ರರುಸುರುತಿಹ ಕರ್ಣಾಟದೊಸಗೆಯನು ಕಿವಿಯಾರೆ ಕೇಳಲಿಕೆ, ಮನತುಂಬ ನೋಡಲಿಕೆ ಸ್ವಾಗತವ ಸ್ವೀಕರಿಸಿ ಬಂದವರ—ಆತ್ಮೀಯ ಮಹಿಶೂರ ಸಂಸ್ಥಾನ ಸಂಸ್ಕೃತಿಯು ಬಿತ್ತರದ ಮಹಿಯಲ್ಲಿ ನೂರಾರು ಭಕ್ತರಲಿ ಬೆಳೆಯುತಿದೆ ಎಂದೆಂದು ತಮ್ಮವರ ನಾಡಿನಲಿ ವಾರ್ತೆಯನು ಹೊತ್ತಿರುವ ಸಾಹಿತ್ಯಗುರುಗಳನು ಸ್ಮರಿಸುತಿಹೆನು.

ಆ ದಿನದ ಸಂತೋಷಕೂಟದಲಿ, ಆ ದಿನದ ಹುಡುಗಾಟದಾಡುಂಬೊಲದಲಿ, ಹಿರಿಯವರು ಕಿರಿಯವರು, ಗಂಡಸರು ಹೆಂಗಸರು, ಸಾಹಿತ್ಯದುತ್ಸವದ ಕಾರಣಕೆ, ಪರವೂರಿನತಿಥಿಗಳು, ಸಂಸ್ಕೃತಿಯ ನಾಯಕರು, ಕರ್ಣಾಟದಭಿಮಾನಿ ತ್ರಿತಯವು—ಶ್ರೀ ಶ್ರೀ-ವೀಸಿ-ವೆಂಕಣ್ಣ ಪ್ರಭೃತಿಗಳು ಬಂದಿರುವ ಸಮಯದಲಿ ನಾವೆಲ್ಲ ಸಮ್ಮಿಳಿತರಾಗಿದ್ದು, ಹೊಸತೊಂದು ಉತ್ಸಾಹ ಬೆಳೆವಾಗ,—ವಿಧಿಯ ದುರ್ಮಾನವಶನಾಗಿ, ಹುಡುಗಾಟದಕ್ಕರೆಯಿಂದ, ಬಾಲಿಶದ ಮನದಿಂದ, ಹಿರಿಯವರ

ಕುಸುಮಕೋಮಲದ ಹೃದಯವನು ನೋಯಿಸುತ ನಾ-
ನಪರಾಧಿಯಾಗಿ ಕಂಬನಿಯಿಳಿಸಿ ಸೋಲ್ದು ನೇ-
ಪಥ್ಯಪಥ್ಯವನು ಕೈಕೊಂಡಾಯ್ತು ವರುಷವೊಂದು.

ಈ ಬಾರಿ ನಮ್ಮೂರ ಮಿತ್ರರಿಗೆ ಸಾಹಿತ್ಯ-
ದುಪದೇಶಮಾಡಲಿಕೆ ಧಾರ್ವಾಡ ಪಟ್ಟಣದ
ಕವಿವರ್ಯ ಅಂಬಿಕಾತನಯ ದತ್ತಾತ್ರೇಯ
ಬೇಂದ್ರೆಗಳು,
ಬಡತನದ ಹಿಡಿತದಲಿ ಸಿಲುಕಿದ್ದ ಮೂವತ್ತು-
ಮೂರು ಕೋಟಿಗಳ ಬಿಸಿ ಧಮನಿಗಳ ಕಡೆಯಿಂದ
ದುಃಖಗಳ ಸುದ್ದಿಯನು, ಸಂಕಟದ ವಾರ್ತೆಯನು
ಹೊತ್ತು ಬರುತಿಹರೆಂದು ತಿಳಿದಿಹೆನು, ಏನೆಂಬೆ!
ಈ ವರ್ಷ ಸಾಹಿತ್ಯದುತ್ಸವದ ಕ್ಷೇತ್ರದಲಿ
ನಾನಿಲ್ಲ. ಬಹುದೂರದಿಂದೆಲ್ಲ ಊಹಿಸುವೆ.
ಹಿಂದಾದ ಕಾರ್ಯಗಳ ಅನುಭವವ ಸ್ಮರಿಸುವೆನು.
ಮುಂದಾಗಬಹುದಾದ ವಿಷಯಗಳ ಚಿಂತಿಸುವೆ.
ನಮಗೆಲ್ಲ ಪ್ರೋತ್ಸಾಹವಚನವನು ಕೊಟ್ಟಿದ್ದ,
ನಮ್ಮವರ ಮೇಲ್ಮೆಯನು ಸಾಧನೆಗೆ ತಂದಿದ್ದ
ಮಾಸ್ತಿಗಳು, ಪ್ರಾಕ್ತನರು, ಶರ್ಮರು, ಪುರೋಹಿತರು,
ಪಂಜೆಯರು, ಮಂಜೇಶ್ವರರು, ಕಾಮತರು, ಮುಳಿಯ-
ವರು, ಹುರುಳಿಯರು, ಶ್ರೀನಿವಾಸ, ನರಸಿಂಗ, ಉಳ್ಳಾಲ,
ಉಗ್ರಾಣ, ಶ್ರೀನಂದ, ಕಾರಂತ, ಶಂಕರರು,
ಸೇಡ್ಯಾಪು, ಶಾಸ್ತ್ರಿಗಳು, ಆಚಾರ್ಯ, ಪೇಜಾವರರು,
ರಾಮಚಂದ್ರರು, ಗಣೇಶರು, ಭಟ್ಟನಾರಾಯಣರು,
ಬಾಳಿಗರು, ಮೇಣು ಸೀತಾರಾಮರಾದಿ ಮಿತ್ರರನು
ಸ್ಮೃತಿಪಥದಿ ನಡೆಯಿಸುತ ನಡೆಯುವೆನು ಮುಂದು.

ಆ ದಿವಸ-
ದಿಕ್ಕಟ್ಟಿನಲಿ ನುಚ್ಚುನೂರಾಗಿ ನಾನೊಡೆದು-
ಬಿದ್ದಾಗ ಬಂದು ಸರಿಪಡಿಸಿದೆನ್ನಯ ಸಹೋ-
ದ್ಯೋಗಿ ನಾಲ್ವರನು ನೆನೆಯುವೆನು. ಮೇಣ್ ಆಹೊತ್ತು
ಸ್ವಾತಂತ್ರ್ಯದಾಸರೆಗೆ ಬಲಿಬಿದ್ದು ಮಾಡಿದ್ದ,
ಮಾಡದಿರುವಾ ಗುಣಾತೀತಗಳ ಕ್ಷಮಿಸಿರುವೆ
ನೀನೆಂದು ಆ ಹಿರಿಯ ಗುರುವನ್ನು, ಕರುಣಾಳು-
ಮೂರ್ತಿಯನು, ಮಗುವೊಂದು ನೆನೆವಂತೆ ನೆನೆಯುವೆನು ನೆನೆದು.

ಪುತ್ತೂರು ಗ್ರಾಮದಲಿ ತಂಗಿದ್ದ ಅತಿಥಿಗಳಿಗೆ
ಸ್ವಾಗತವನೀಯಲಿಕೆ ಹೊರಟಾಗ, ಬಹುದೂರ-
ದಾರೋಗ್ಯದಾಶ್ರಮದಿ ನಮ್ಮೂರ ಮಂಡಳಿಯ
ಸ್ಥಾಪಕನು ರಾಘವನು
ನೆಲವಿಡಿದು ಮೃತ್ಯುಮುಖನೆಂಬುದನು ಕೇಳ್ದಂದು,
ಗದ್ದೆಗಳ ಕೆಸರಿನಲಿ, ಹಳ್ಳಗಳ ನೀರಿನಲಿ,
ಕಾಡುಗಳ ಮಾರ್ಗದಲಿ, ಗುಡ್ಡಗಳ ಇಳಿತದಲಿ
ನಾ ನಡೆದು ಪೋದುದನು ನೆನೆಯುವೆನು. ಅವನಿತ್ತ
ಸಾಹಿತ್ಯಭಕ್ತಿಯನು ಗೆಳೆತನದ ಕುರುಹಾಗಿ
ಪಡೆದಿಹೆನು ಎಂಬುದನು ಈ ಬಾರಿ, ಈ ದಸರೆ,
ಈ ಕ್ಷಣವೆ ಸ್ಮರಿಸುತಿಹೆನು.

ತಿರಿಗೊಮ್ಮೆ! ಕಳೆದ ಬಾರಿಗೆ ನನ್ನೊಡನೆ ಸೇರಿ
ಅತಿಥಿಗಳಿಗುಪಚಾರ ಮಾಡಿರುವ ಮಿತ್ರರಿಗೆ
ನನ್ನನ್ನು ಸ್ಮರಿಸುವೆನು. ಮೈಸೂರಿನತಿಥಿಗಳೆ!
ಕಳೆದಬಾರಿಗೆ ನಮ್ಮ ಕೇಳಿಕೆಯ ಮನ್ನಿಸುತ
ನಮ್ಮೊಡನೆ ದಿನವೊಂದು ಕೂಡುತ್ತ ಬಳಿನಿಂತು
ಗಟ್ಟಗಳ ಈಚೆಯಲಿ ಹೊಳೆಯುತಿಹ ಕನ್ನಡಕೆ
ತಿದಿಯೂರಿ ಬೆಳಗಿಸಿದ ನಿಮ್ಮೆಲ್ಲರಿಂಗೆ
ನಮ್ಮನ್ನು ಸ್ಮರಿಸುವೆನು ಸ್ಮರಿಸಿ.

# ಬಯಕೆ

ಆಗಸವು ಸಾಗರವ ಕೂಡುವೆಡೆಯಲ್ಲಿ,
ಮೇಲಿರುವ ಬಿತ್ತರವ ಕೆಳಕೆಳಗೆ ತಳ್ಳಿ
ತಾ ಬಿಟ್ಟ ಇಂಬಿನಲಿ ಶಾಂತಿಯನು ಚೆಲ್ಲಿ
ಮೆಲ್ಲನೇ ಮೇಲೇರಿ ಬರುತಿಹುದು ತೇಲಿ
ದಪ್ಪನಿಹ ಮುಗಿಲೊಂದು ಕರಿಬಣ್ಣದಲ್ಲಿ.

ಬದಿಬದಿಯ ಡೊಂಕನ್ನು ಬಿಳಿವಳ್ಳಿಯೊಂದು,
ನಡುನಡುವೆ ಬಿರುಕನ್ನು ಬೆಳ್ಳಿಹೊಳಪೊಂದು
ತೋರುತಿವೆ ಬೆಳಗುತಿವೆ ಝಗಝಗಿಸಿ ನಿಂದು,
ಮುಗಿಲಿಂಗೆ ಈಯುತಲಿ ತೆಳುರೂಪುವೊಂದು,
ಸೂಕ್ಷ್ಮದಲಿ ತಾವೊಂದಿ ಸ್ಥೂಲತೆಯನೊಂದು.

ತೇಲುತ್ತ ಮೇಲೇರಿ ಪೋಗುವೆಯ ಮುಗಿಲೆ?
ಮುಂಬರಿದು ಬದಿಯಲ್ಲೆ ಚಣಹೊತ್ತು ಹೊಳೆಯೈ!
ನೇಸರನು ಇಳಿಯುವನು ದಿನದಾಯು ಕಳೆಯೆ;
ಮೇಲಿರುವ ಬಾನಿನಲಿ ಹರಡುತಿದೆ ಮುಸುಕು.
ಮೇಲೇರಿ ಮೇಲೇರಿ ಹೋಗದಿರು ಬಂಧು!

ಹಾ ದೈವ! ಹಾ ದೇವ! ಬಿಳಿ ಹೊಳಪು ನಿನ್ನ
ಭೀಕರದ ರೂಪನ್ನು ಹೊರಸೂಸಿ ಮುನ್ನ
ಕೆಂಪೇರಿ ಜ್ವಲಿಸುತಿದೆ ವರ್ಣದಲಿ ನಿನ್ನ.
ವೇಗದಲಿ ಮುಗಿಲುಗಳ ಮರೆಗೊಮ್ಮೆ ತೆರಳು!
ಅಲ್ಲೊಂದು ಚಣಗಾಲ ಸ್ವಪ್ರಕೃತಿ ತೋರು!

ಅಯ್ಯಯ್ಯೊ! ಬಿತ್ತರದ ಬಾನೆಲ್ಲ ಕೆಂಪು!
ಅಯ್ಯಯ್ಯೊ! ನಂಬಿರುವ ಮುಗಿಲೆಲ್ಲ ಕೆಂಪು!
ಎಲೆ ಮುಗಿಲೆ, ನೀನೇಕೆ ಧಾವಿಸುವೆ ಬರಿದೆ?
ನಿನ್ನಲ್ಲಿ ಚಿರಕಾಲ ಸೈಪಿಲ್ಲ ನನಗೆ!
ನಿನ್ನಲ್ಲಿ ಚಿರಕಾಲ ಸುಖಶಾಂತಿಯದುವೆ.

ತೆಳುವಾಗಿ ಮೇಲೇರಿ ನೀ ತೆರಳು, ಕಡೆಗೆ
ಕತ್ತಲೆಯ ಬಯಲಲ್ಲಿ ನಿಃಶೇಷಮಡಗೆ;
ಎಲೆ ಮುಗಿಲೆ, ಚುಕ್ಕಿಗಳ ಮರೆಯಾಗಿ ನೀನು
ಅಲೆಯದಿರು, ನಿಲ್ಲದಿರು, ತೇಲದಿರು ಬಂಧು!
ಚುಕ್ಕಿಗಳ ಹೊಳಪೊಂದು ಹಬ್ಬವೆನಗೊಂದು.

# ಸಿರಿಪನ್ನೆ

ಆರೇಯಿಯಾಕೆಯು ನಡೆವಳು, ಚೋರನ ಪದಗಳ ಭೂಮಿಗೆ ಸ್ಪರ್ಶಿಸುತ,
ಚಲಿಸುವ ಉಸುರನು ಮೆಲ್ಲನೆ ತಡೆಯುತ,–ಮರಣದ ಚೇಷ್ಟೆಯು ನಟಿಸುತ್ತ,
ಎಡದಲಿ ಬಲದಲಿ, ಹಿಂದಕೆ ಮುಂದಕೆ ದೃಷ್ಟಿಯ ಮಿಂಚನು ಸೂಸುತಲಿ
ಏತರ ಗುಡುಗನು ಗುಡುಗಿಸೆ ಬರುವಳು ಕಾಲನನಂತದ ಬಾಂದಳದಿ?

ದೂರದಿ ಉರುಳುವ ಸಾಗರದೂರ್ಮಿಯು ಮೆಲ್ಲನೆ ಮುಂದಕೆ ಬರುವಂತೆ,
ದೂರದ ಶಬ್ದದ ದೀರ್ಘದ ಪಡಿದನಿ ತಿಳಿಯದ ತೆರದಲಿ ಹರಿವಂತೆ,
ಮೇಘದ ನೀಲಚ್ಛಾಯೆಯು ಬಿಸಿಲನು ಮೆಲ್ಲನೆ ಕ್ರಮಿಸುವ ತೆರದೊಳಗೆ,
ಬರುವಳು, ಹಾಹಾ! ಮೆಲ್ಲನೆ ಬರುವಳು, ದುಃಖಿತ ಹೃದಯದ ಸಿರಿಪನ್ನೆ!

ಶೌರ್ಯದ ಗರ್ಭದಿ ಸತ್ಯವನಡಗಿಸೆ, ಪನ್ನೆಯೆ, ಜಾಗ್ರತೆ ನಿನಗೇಕೆ?
ಸತ್ಯವು ನಿಲ್ವುದೆ ಅಸ್ಥಿರತಟದೊಳು, ಕಮಲದ ಪತ್ರದ ಜಲದಂತೆ?
ಶುಭ್ರದ ಕೊಳಗಳ ಭೀಕರ ಗುಹೆಯೊಳು ಕಮಲೆಯು ವಾಸಿಪ ತೆರದೊಳಗೆ,
ತ್ಯಾಗದ ರಕುತದ ತೊರೆಯುಲಿ ಸತ್ಯವು ನಿಂತರು ನಿನಗದು ಅಚ್ಚರಿಯೆ?

ಅಡಗಿಸು ಅಡಗಿಸು ಸತ್ಯದ ತೇಜವ ಭದ್ರತೆ ಮೇಘದ ತೆರೆಯಲ್ಲಿ!
ಅಲೆಯುವ ಮೇಘವು ಹೊರಡಲು–ತೋರ್ಪುದು ಸತ್ಯದ ರೂಪವು ನಿಜದಲ್ಲಿ!
ಪನ್ನೆಯೆ, ನಿನ್ನಯ ಕಯ್ಪಳಿಕಿರುದನಿ ಮಲಗಿಹ ಕೋಟೆಯನೇಳಿಪುದು!
ನಿನ್ನಯ ಮನಸಿನ ಮೋನದ ಮೆಲ್ಲುಲಿ ಜಗವನು ತನ್ಮಯ ಮಾಡಿಹುದು!

ಸತ್ಯದ ಸಿದ್ಧಿಯು ನಿರ್ಮಲರಕ್ತದ ಕೊಳದಲಿ ನಲಿದರೆ ಗೌರವವೆ?
ಒಳಿತನು ಬಳಲಿಸಿ ಮನ್ನಣೆವಾಳ್ವುದು ಲೋಕದಿ ಮುಡಿಯದ ಶಾಸನವೆ?
ಸತ್ಯವೆ, ನಿನ್ನಯ ದೂರದ ಗುರಿಯನು ಸೇರಲು, ಕಂಟಕ ಸಾಸಿರವು
ಬಿಡದೊಡೆ, ನೀನೇ ಮುಂದಕೆ ಚಾಚುತ ಬರುವೆಯ ಭಜಕರ ರಕ್ಷಿಸಲು?

ಅನ್ನೆಯನೇಣುಂ ನನ್ನಿಯ ನೆಳಲನು ಬಂಧಿಸೆ ಜತನವ ಮಾಡಿದೊಡೆ,
ಜವ್ವನ ನನ್ನಿಯು ಬಿನದದ ಬಗೆಯಲಿ ಆಟವಗೈವುದು ಸರಿಯಲ್ತೇ!
ಆದರೆ, ಮಾಯೆಯ ಕಳ್ತಲೆರಾಜ್ಯದಿ ಪರರಿಗೆ ಎಸೆದಿಹ ನೇಣುಗಳು
ತಿಳಿಯದ ತೆರದಲಿ ಹಿಂದಕೆ ತಿರುಗುತ ಪಾಪಿಯ ಗೋಣನವುಂಕುವವು!

ಸತ್ಯವು ಗೆಲ್ವುದು ಪ್ರಕೃತಿಯ ನಿಯಮದಿ, ಪನ್ನೆಯೆ, ನೀ ತಿಳಿ ಮತಿಯಿಟ್ಟು;
ಸತ್ಯದ ಮಿಥ್ಯದ ಬವರದಿ ಜನಗಳು ಸಹಜವು ಬವಣೆಯ ಪೊಂದುವುದು.
ಸತ್ಯದ ನಿಯಮದಿ ನಿನ್ನಯ ಪ್ರೇಮವು ಅಸದೃಶವಾಗಿರೆ, ಎಲೆ ಮುಗುದೆ,
ನಿನ್ನಯ ನೆತ್ತಿಯ ಮೇಲಕೆ ಜೋಲ್ವುದು ಶಿಥಿಲದ ಸೂತ್ರದಿ ಕೂರಸಿಯು!

ನಡೆನಡೆ, ಪನ್ನೆಯೆ, ಏತಕೆ ಮೆಲ್ಲನೆ ಪೋಗುವಿ, ಹೆದರುತ ಪಾಪಿಯನು?
ಸೈಪಿನ ಕಾಯ್ಪುದು—ನಿನ್ನಯ ಕಾರ್ಯದ ಗತಿಯನು ಆಗಳೆ ವಿಧಿಸಿಹುದು.
ಪೆಣ್ಣಿನ ಪೌರುಷ ಪುರುಷರ ಬೀರವ ತುಲನೆಗೆ ಕರೆಯಲಿ, ಸಿರಿಪನ್ನೆ!
ಒರ್ವಳೆ ಪೋಪಳು ನೋಡಿರೆ,—ವಿಾಸೆಯ ಜನಗಳೆ ನಿಮ್ಮನು ಬದಿಗೊತ್ತಿ.

೨

"ಛೋಟಾರಾಣನು ಕಾಣನು ತಾಯೇ-ಸಂಜೆಯ ಕತ್ತಲೆ
ಪೆರ್ಚುವುದು;
ದೂರದ ಭೇರಿಯ ಬಿರುದನಿಮೂಲವ ನೋಡಲು ಪೋದನೆ, ಮನಸೋತು?
ಉನ್ನತ ಬೆಟ್ಟದ ಗುಮ್ಮಗೆ ಬೆದರುತ ಮೂಲೆಯ ತಮದೊಳು ಅಡಗಿಹನೆ?
ಸಂಜೆಯ ಸುಯ್ಯಲು ಮಾರುತವೇಗಕೆ ಸ್ಪರ್ಧೆಯನೀಯುತ ಓಡಿದನೆ?

ಹುಡುಕುವೆ, ಹುಡುಕುವೆ, ಬಾರೆಲೆ ತಾಯೇ, ಸೂಡರನು ಬೆಳಗಲು
ನೀ ಬಾರೆ!

"ಸಂಜೆಯ ಕತ್ತಲೆ ಬಾಗಿಲ ಸನಿಯದಿ ನಿಂತಿದೆ ಉದಯನ ತಡೆಯಲ್ಕೆ,—
ಆಗಸದಾರೆಯೆ! ಕತ್ತಲೆಮಧ್ಯದಿ ಉದಯಗೆ ಬೆಳಗನು ನೀ ತೋರೆ!
ಓಡುವ ತಾರೆಯೆ! ಬಟ್ಟೆಯಗೆಟ್ಟಿಹ ಉದಯನ ಹುಡುಕಲು ನೀ ಪೋಗೆ!
ಏತಕೆ ಮುಚ್ಚುವೆ?—ನೇಹದ ಮುದ್ದನು ನಿರುಕಿಸೆ ಕುದುರೆಯ ನೀನೇರೆ!

ಹುಡುಕುವೆ, ಹುಡುಕುವೆ, ಬಾರೆಲೆ ತಾಯೇ, ಸೊಡರನು ಬೆಳಗಲು
ನೀ ಬಾರೆ!

"ಇಂಚರದರಗಿಳಿ ಮಂಜುಲ ಸ್ವರದಲಿ ಉದಯನ ಕರೆಯೈ ಒತ್ತಡವೆ.
ಎಲ್ಲಿಗೆ ಪೋದನು ಉದಯನು ತಾಯೇ? ಮನಸನು ಖೇದವು ಕೊರೆಯುತಿದೆ!
ಆಟವು ಸಾಗದು, ಪಾಠವು ಸಾಯಲಿ, ಊಟವ ಮಾಡೆನು ಕೇಳ್ ತಾಯೆ,
ಬೀರದ ಸೂಡಿನ ಬೇಟೆಯ ಕತೆಗಳ ಕೇಳೆನು ಉದಯನು ಇಲ್ಲದೊಡೆ.

ಹುಡುಕುವೆ, ಹುಡುಕುವೆ, ಬಾರೆಲೆ ತಾಯೇ, ಸೋದರನು ಬೆಳಗಲು
ನೀ ಬಾರೆ!"—

ಎನ್ನುತ ಉದಯನ ಓರಗೆಯ
ಬಾಲನು ಪಿರಿದುರೆ ರೋದಿಸಿದ.

ಅಣುಗನ ಪ್ರಶ್ನೆಗೆ ಮೋನದಿ ಕಂಬನಿಯಿತ್ತಳು ಪನ್ನೆಯು ಸೆರಗಿಟ್ಟು;
ಆಗಳೆ ಕುವರನ ಕಂಗಳು ನುಂಬನಿಸೋನೆಯ ಕರೆದವು ಮೊರೆಯಿಟ್ಟು.
ಜನನೀಪುತ್ರರ ಒಲುಮೆಯ ದುಃಖವು ಐಕ್ಯವ ಪೊಂದಿತು. ಮುದ್ದಿಟ್ಟು
ಪನ್ನೆಯು ಪೆರೆಮೊಗ ಬಾಲನ ಕಂಗಳ ಸೋದೆಯನು ಕುಡಿಯುತ ಪೇಳಿದಳು:

"ಕಂದನೆ ಕೇಳೈ, ಉದಯನು ನಿದ್ದೆಯ ತಾನೇ ಮಾಳ್ಪನು ಸುಖದೊಳಗೆ;
ಗೋಳನ್ನಿಡುತಲಿ ರಾಣನ ನಿದ್ದೆಯ ಕೆಡಿಸಲು ಬಾರದು ಬಾಲಕನೆ!
ಆಟವನಾಡೈ ರಾಣನ ಪಾತ್ರವ ವಹಿಸುತೆ ಈಗಳೆ, ಎಲೆ ಕಂದ!
ತೊನೆಯುವ ಪೂವಿನ ಗೊಂಚಲ ಮುಕುಟವನಿಡುತಲಿ ಮನಸನು ಪೂರೈಸೆ!

"ಏರೈ ಗದ್ದುಗೆ—ಎಲರಿನ ಏರುಂಗತಿಯಾ ವೀಚಿಯ ಮೆಟ್ಟಲನು
ಮೆಟ್ಟುತ-ಸೈಪಿನ ರಾಜ್ಯವನಾಳಲು, ಉಬ್ಬುವ ಬೀರದ ಮೈಯ್ಯೊಂಡು!
ಇಂದಿನ ಸಂಜೆಗೆ ದೇಶದ ರಾಣನು ಪನ್ನೆಯ ಪುತ್ರನು, ಜನಗಳಿರ!
ಉಡು ನೀ ಬಟ್ಟೆಯ, ತೊಡು ನೀ ಥಾಣೆಯ, ಝುಳಪಿಸು ಕತ್ತಿಯ
ನೀ, ವೀರಾ!

"ಭೋಟಾರಾಣಗೆ—ಪನ್ನೆಯ ಪುತ್ರಗೆ—ಮಂಗಲ ಬೆಳಗಲಿ ಧರೆಯಲ್ಲಿ!
ಸಾಗರವೇಷ್ಟಿತ ಜಗದೊಳು ನಿನ್ನಯ ಛತ್ರದ ಆಸರೆ ಪೆರ್ಚಿರಲಿ!
ವಂದಿಯ ಸ್ತೋತ್ರವ ಕೇಳುತ ಬಿರಿಸೊಗ ನಿದ್ದೆಯ ಮಾಡುತ ತೊಟ್ಟಿಲೊಳು,
ಕನಸೊಳು ನನಸಿನ ವೈಭವ ತಳೆಯುತ ಜನ್ಮವ ಸಾರ್ಥಕ ನೀ ಮಾಡು!"

ಅಂಬೆಯ ಮಾತನು ಲಾಲಿಸುತ
ಕುವರನು ಪೇಳಿದ ನಲಿಯುತ್ತ:—

"ರಾಣನ ಪಾತ್ರವ ವಹಿಸುವೆ, ತಾಯೇ, ಬಾರಾರಾಣಿಯು ನೀನಿಂದು!
ಅರಿಗಳ ಗೋಣನು ಮುರಿಯುತ, ನಾಡೊಳು ಸ್ವಾಸ್ಥ್ಯವ ಸ್ಥಾಪಿಸಿ
ಆಳುವೆನು!
ದಾರಿಯು ಕೆಟ್ಟಿಹ ಉದಯನ ಹುಡುಕಲು ಚಣದಲಿ ಓಡಿರಿ, ಸೈನಿಕರೆ!
ನಾಡೊಳು ಶಾಂತಿಯು ನೆಲೆಸಲು ಪೋಗಿರಿ, ಎನ್ನಯ ಪ್ರೀತಿಯ ರಾವುತರೆ!"

ಕವಡಿನ ವಚನವು ಕುವರನ ಕೋಮಲ ಮನದೊಳು ನಾಟಿತು ಎಂದೆನುತ
ಪನ್ನಿಯು ಮನದಲಿ ಸಂತಸಲವವನು ತಳೆಯುತ ಕಂದನ ಹರಸಿದಳು.
ರಾಣನ ವೇಷದ ಹರುಷದ ಬಾಲನ ಮಲಗಿಸಿ ತೂಗುಂದೊಟ್ಟಿಲೊಳು,
ಸುಖಮಯ ದುಃಖದ ಧಾಟಿಯ ಪದದಲಿ ಪುತ್ರಗೆ ಜೋಗುಳ ಪಾಡಿದಳು.

ಸಪ್ತಸಾಗರ ಗುಹೆಗಳಿಂದಾ ।
ಜಗವ ಪಾಲಿಪ ಲೀಲೆಯಿಂದಾ ।
ಪ್ರಳಯಕಾಲದ ಗರ್ಭದಿಂದಾ ।
ಶಾಂತಿ ತಂದಿಹೆನು—
ನಗುವೊಗದ ಕಂದಾ ।
ಶಾಂತಿ ತಂದಿಹೆನು ॥

ಹಡಗುವೋಡುವ ಸಿಂಧುವಿಂದಾ ।
ನಲಿಪ ತನಿವಣ್ ವನಗಳಿಂದಾ ।
ತಾರೆ ಬೆಳಗುವ ಲೋಕದಿಂದಾ ।
ಕಪ್ಪ ತಂದಿಹೆನು—
ನಗುವೊಗದ ರಾಣಾ
ಕಪ್ಪ ತಂದಿಹೆನು ॥

ದೇಶಚರಿತೆಗೆ ಕುಂದು ತರುವಾ ।
ದೇಶದೈಸಿರಿ ಸೂರೆಗೈವಾ ।
ಮ್ಲೇಚ್ಛರಬ್ಬರ ತುಳಿಯಲೆಂದಾ ।
ಹೂಡು ಯುದ್ಧವನು —
ನಗುವೊಗದ ಕಂದಾ ।
ಕಾಯು ಗೌರವವ ॥

ರಾಜನಾಗುವ ಕನಸು ತಂದಿಹೆ ।
ಆತ್ಮಯಜ್ಞದ ಗೋರಿ ತಂದಿಹೆ ।
ಸತ್ಯವಾಗುವ ಕನಸುತಂದಿಹೆ ।
ಹೊಂದು ಶಾಂತಿಯನು—
ನಗುವೊಗದ ರಾಣಾ ।
ಕನಸ ರಾಜ್ಯದೊಳು ॥

೩

**ಬೆ**ಟ್ಟಿದು, ತಿಟ್ಟಿದು, ಪೊಲನಿದು, ತೊರೆಯಿದು ಎಂಬುದ ನೋಡದೆ
    ಓಡುವಿಯಾ?
ಮುಂದಕೆ ನಿನ್ನನು ನೂಂಕುವರಾರೈ, ಇದಿರೊಳು ನಿನ್ನನು ಸೆಳೆಯುತ್ತ?
ನಿಲ್ಲೆಲೆ, ನಿನ್ನಯ ಕಿವಿಯೊಳು ಬೆಂಕೆಯ ವಾರ್ತೆಯನುಸುರುವೆ, ವನವೀರಾ!
ಕಲ್ಲಿಗೆ ಎಡವುವಿ, ಮುಳ್ಳಿಗೆ ತಡವುವಿ, ಬೀಳುವಿ ಕರ್ಮಡು ಮಧ್ಯದೊಳು!

ನರಕದ ದ್ವಾರವು ತೆರೆದಿದೆ ಮುಂದಕೆ ಕುದುರೆಯ ರಭಸವನಿಳಿಸಯ್ಯಾ!—
ರಭಸದ ಜೋರಿಗೆ ನರಕದ ಗೋಡೆಗೆ ಮಂಡೆಯನೊಡೆಯುತ
    ಸಾಯುವಿಯಾ?
ಕುದುರೆಯ ನಿಲ್ಲಿಸೆ ಕುಳಿತಲ್ಲಿಂದಲೆ ಕುದುರೆಯ ಕಾಲನು ನೀ ಕಟ್ಟು!
ಅಥವಾ, ಕುದುರೆಯ ಬೆನ್ನನೆ ಬಿಡುತಲಿ, ಮೂರ್ಖನೆ, ಅಲ್ಲಿಯೆ ನೀನುಳಿಯು!

ನಿನ್ನಯ ಬೆನ್ನಿನ ಹಿಂದಕೆ ಕೂಗುತ ಕೀರುತ ಓಡುವರಿವರಾರು?
ಅವುಗಳ ಭಯದಿಂ ನೀನೇಂ ಓಡುವಿ! ಹಿಂದಕೆ ನೋಡದೆ, ನೀ ಪೇಳು!
ಅನ್ನೆಯ, ಮಚ್ಚರ, ಪಾಪವು, ಮುನಿಸುಂ ಎಂಬೀ ಮಿಗಗಳು ಓಡುವವು
ಬೆನ್ನನು ಹಿಡಿಯುತ, ಮೋಸದ ರಕ್ತದ ನಿನ್ನನು ಕೊಲ್ಲಲು, ಹೇ ಖೂಳಾ!

ಓಡುತ ಓಡ್ಯೈ—ಬೀಳುವತನಕಂ ಬೀಳುವ ಯೋಚನೆ ನಿನಗಿಲ್ಲ!
ಬೀಳುತ ಬೀಳ್ಯೈ—ರಭಸದಿ ಓಡಿದ ಮನುಜನು ಬೀಳಲೆಬೇಕಿಲ್ಲ!
ಇದಿರೊಳು ಎಲ್ಲವು ಶೂನ್ಯವು ನಿನಗೆಲೆ, ಓಡುತ ಓಡ್ಯ, ಓಡುತನೇ!
ಆದರೆ, ನಿಲ್ಲೆಲೆ ಇನಿತುಂ ಚಿಂತಿಸು ತನ್ನೀ ಕಾರ್ಯದ ಲಕ್ಷಣಮಂ!

ದ್ರೋಹದ ಕಾರ್ಯವು ವಧ್ಯವು ಜಗದೊಳು; ದ್ರೋಹವು
    ಉಭಯರ ಅಂತಕನು!
ದ್ರೋಹದ ಬಲದಿಂ ಕ್ರೌರ್ಯವ ತಳೆಯುತ, ಹೇಡಿಯೆ, ಪಾಪವ
    ಮಾಡದಿರು!
ದ್ರೋಹದ ಕಾರಣ ಬಸಿದಿಹ ನಿರ್ಮಲ ರಕ್ತದಿ ತೊಳೆಯುತ ಕೈಯನ್ನು,
ವಿಶ್ವವು ರಕ್ತದ ನೋಟವದಾಗಲು—ನಿನ್ನಯ ರಕ್ತವು ನಾಶವು!

೪

ಸಿಡಿಯುವ ಸಿಡಿಲಿನ, ಮೊರೆಯುವ ಕಡಲಿನ, ರೋಷದ ಸಿಂಗನ
ಪ್ರತಿನಿಧಿಯು
ಬರುವನು ನಿದ್ದೆಯ ವಧೆಯನು ಮಾಡಲು-ಗಾಢದ ನಿದ್ದೆಯ ಮಾಡದಿರು!
ಕನಸಿನ ಸೌಖ್ಯವ ಪೊಂದಲು, ಕಂದನೆ, ದಿವಸದ ಶಾಂತಿಯು ನಿನಗೆಲ್ಲಿ?
ಇಂದಿನ ದಿವಸವು ತುಂಟರ ವಶವಿದೆ—ನಿದ್ದೆಯ ಗೈಯ್ಯುವಿ ನೀನೇಕೆ?

ಉದಯನ ವಧೆಯನು ಮಾಡಲು ಈಗಳೆ ಆತನ ಕೌರ್ಯದ ದಾಯಾದಿ
ಬರುವನು, ದೆಡವನು ಮೀರಿದ ಉಬ್ಬುವ ಸಾಗರದೂರ್ಮಿಯ ತೆರದಲ್ಲಿ.
ರೂಪದಿ ಮಿಳ್ತುವು; ವರ್ಣದಿ ಕಳ್ತಲೆ; ದೇಹದ ಗಾತ್ರದಿ ಕಾರ್ಮುಗಿಲು—
ತಿರ್‍ರನೆ ತಿರುಗಿಸಿ ಸೌಳನೆ ಸೀಳುವ, ಪಿಡಿಯುತ ಕೈಯೊಳು ಕೂರಸಿಯ!

ದ್ವಾರವನೊಡೆಯುತ ಪ್ರಥಮದ ಹೊಡೆತಕೆ, ಬಂದನು ಖೂಳನು ವನವೀರ;
ಸುತ್ತಲುಮುತ್ತಲು ಕೂರಸಿ ದಿಟ್ಟಿಯ ಬೆಳಗುತ, ಹುಬ್ಬನು ಗಂಟಿಕ್ಕಿ,
"ನೋಡೆಲೆ ದಾಸಿಯೆ! ಖೂಳನ ಪುತ್ರನ ತೋರಿಸು ರಾಣನಿಗೆನಗೆ"ಂದು
ಪನ್ನೆಯ ಕೋಮಲ ಕೇಶವನೆಳೆದನು ತನ್ನಯ ಕಲ್‌ಕೆಯ್ ಮುಷ್ಟಿಯೊಳು.

"ಎನ್ನಿಂ ರಾಣನ ಪುತ್ರನ ತೋರಿಸೆ ಆಗದು, ಆಗದು, ಎಲೆ ಖೂಳಾ!
ಸ್ವಾಮಿಯ ಭಕ್ತಿಯ ದೂಷಿಸೆ ಪನ್ನೆಯ ಹೃದಯವು ನಿಜದಲಿ ಚಿಂತಿಸದು!
ತಿರುಗೆಲೆ, ಸಾಸಿರ ತಾರೆಯು ಮಿನುಗುತ ನೋಳ್ಪುವು ನಿನ್ನನು ಬಾಂದಳದಿ!
ಶಿಶುಗಳ ಹತ್ಯವ ಮಾಡುತ ನರಕದ ಕೆಸರನು, ರಾಣಾ, ಪೊಂದದಿರು!"—

ರಾಣಗೆ ಪನ್ನೆಯು ಇಂತೆಂದು
ಪಥ್ಯದ ವಚನವ ಪೇಳಿದಳು.

ರಾಣನ ರೋಷವು ಪೆರ್ಚಿತು; ಕಣ್ಣೊಳು ರಕ್ತದ ಕಿಡಿಗಳು ಹಾರಿದವು.
ಕತ್ತಿಯನೆತ್ತುತ, "ಈಗಳೆ ನಿನ್ನನು ವಧಿಸುವೆ"ನೆನ್ನುತ ಗುಡುಗಿದನು.
ಆಗಲ್ ತೊಟ್ಟಿಲ ನಿದ್ದೆಯ ಸೊಗದಲಿ ಪನ್ನೆಯ ಪುತ್ರನು ಕನವರಿಸಿ,
"ಛೋಟಾರಾಣನು ನಾನೆಲೆ ಖೂಳಾ, ಬಾರೆಲೆ"ಯೆನ್ನುತ ಪಡಿನುಡಿದ.

ಪನ್ನೆಯ ಸೆಳೆಯುತ ತೊಟ್ಟಿಲ ಸನಿಹದಿ ಉರುಳುತ ಬಂದನು ವನವೀರ;
ಕತ್ತಿಯನೆತ್ತುತ ರಭಸದಿ ತಿರ್‍ರನೆ ತಿರುಗಿಸಿ, ಮೇಲಕೆ ಹಾರಿಸುತ,
ಪನ್ನೆಯ ಪುತ್ರನ ಕುಸುಮದ ಕೋಮಲ ಹೃದಯದ ಲಘುತರ ಮಧ್ಯದೊಳು
ತಿವಿದನು ಮೂರ್ಖನು, ಹೃದಯದ ಮಧುವದು ಚಿಳ್ಳನೆ ಮೇಲಕೆ
ಹಾರಿದುದು!

"ಮೇವಾರ್, ಮೇವಾರ್! ಮಮ ಹೇ ಮೇವಾರ್!" ಎನ್ನುತ ದೈನ್ಯದಿ
ಮೊರೆಯಿಟ್ಟು
ಪನ್ನೆಯ ಪುತ್ರನು ಅಸುಗಳ ತೊರೆದನು ಕನಸಿನ ನನಸೊಳು ಸುಖದಿಂದ.
ನಿರ್ಮಲರಕುತದಿ ಕೈಯನು ಮುಳುಗಿಸಿ ಖೂಳನು ಹೊರಟನು ಅಲ್ಲಿಂದ
ಆಶೆಗೆ ಫಲಿಸಿದ ರಕ್ತದ ದೃಶ್ಯವ ಮನಸಿನ ಪಟದಲಿ ಲೇಖಿಸುತ.

ದುಃಖದ ಪನ್ನೆಯು ಕಂಬನಿ ಮಿಡಿಯುತ ತೊಟ್ಟಿಲ ಮೇಲಕೆ ಬಾಗುತಲಿ
ಪುತ್ರನ ಬಿರಿಯದ ನಸುನಗೆಮುಗುಳಿನ ಮೊಗವನು ಮುದ್ದಿಸಿ ದುಃಖದಲಿ,
ಅನುಪಮ ಕೃತ್ಯವ ಮಾಡಿದ ಪುತ್ರಗೆ ಚರಮದ ಮಾತಿನ ಗೀತೆಯನು
ಮೋನದಿ ಪಾಡುತ ಮೂರ್ಛೆಯ ಪೋದಳು, ಕಂದನ ಗುಣಗಳ ನೆನೆನೆನೆದು:

ಇನ್ನು ಜಗದ ಹೃದಯದಲ್ಲಿ
ದೇಶಭಕ್ತಿ ಮೂಡುವಂದು
ಸ್ಮರಣೆಯೊಳಗೆ ನಿನ್ನ ಸೇವೆ
ಬರಲಿ ವೀರನೆ!

ಜನರು, ಮಾತೃದೇಶಕಾಗಿ
ಸತ್ಯಸಂಧ ಪಿಡಿದು ಮುಂದೆ
ಅಸುವ ತೊರೆದ ವೀರಬಾಲ-
ನೆಂದು ಪಾಡಲಿ!

# ಅಳಿವುಳಿವು

ದೂರದ ಮುಗಿಲಲಿ ಹುಟ್ಟಿದ ಜೋತಿಯು
ಮನುಜನ ಕಣ್ಣನು ಕಟ್ಟಿಸಿದೆ;
ಅಲ್ಲಿಯೆ ಹುಟ್ಟಿದ ಗುಡುಗಿನ ಘೋಷಣೆ
ಮನುಜನ ಮನ ಹುರಿದುಂಬಿಸಿದೆ.

ದಾರಿಯು ಉದ್ದಕು ಸಾಗಿದ ಚಿತ್ತವು
ಕತ್ತಲು ಕೂಡುತ ಸುಳಿಯುತಿದೆ;
ಚಿತ್ತದ ಬಿತ್ತರವೊಂದಿದ ಬಯಕೆಯು
ಕತ್ತಲೆಯೊಳು ಜಗಳಾಡುತಿದೆ.

ದಾರಿಯ ಬದಿಯಲಿ ರೂಪವನಾಂತಿಹ
ಜೀವನದಂಕುರ ಬೆಳೆದಿಲ್ಲಿ,
ಸಾಗುವ ಕಾಲನ ಪದಗಳ ಹತಿಯಲಿ
ಕೆಡೆವುದು ಮರವೆಗೆ ಬಲಿಯಾಗಿ!

ಮರವೆಯು ಗಬ್ಬವ ಭೇದಿಸಿ ಜೀವನ-
ದಂಕುರ ತೋರ್ಪುದು ತಿರಿಗೊಮ್ಮೆ,
ತನ್ನಯ ಪೂರ್ಣತೆಯಾಶಿಸಿ ಬೆಳೆವುದು
ಇಲ್ಲವೆ ಅಳಿವುದು ಇನ್ನೊಮ್ಮೆ!

# ನಮ್ಮ ನಾಡು

ನಮ್ಮ ನಾಡು, ನಮ್ಮ ನಾಡು, ನಮ್ಮ ನಾಡು,—
ದೇವರಿಂದ ಕೇಳಿತಂದ ಪುಣ್ಯನಾಡು.
ನೂರುನೂರು ವರ್ಷದಿಂದ ಚಿಗುರುತಿಹುದು ಮಾವು
ಕುಕಿಲುತಿರುವ ಕೋಗಿಲೆಗಳಿಗಿತ್ತು ಒಂದು ಬೀಡು;
ಕೋಟಿಕೋಟಿ ಕಾಲದಿಂದ ಹರಿಯುತಿಹುದು ನೀರು
ಕಷ್ಟದಾಳು ರೈತನಿಂಗೆ ಕಟ್ಟಿ ಒಂದು ನಾಡು;
ನಮ್ಮ ನಾಡು, ನಮ್ಮ ನಾಡು, ನಮ್ಮ ನಾಡು,—
ದೇವರಿಂದ ಕೇಳಿತಂದ ಪುಣ್ಯನಾಡು.

ಇದುವೆ ನಾಡು, ನಮ್ಮ ನಾಡು, ನಮ್ಮ ನಾಡು,—
ಸ್ವರ್ಗದಿಂದ ಕೊರೆದುತಂದ ವೀರನಾಡು.
ಸ್ವರ್ಗದೊಡೆಯನಿಂದ್ರನನ್ನು ಮರುಳುಮರುಳು ಗೈದು,
ಅಗ್ನಿಯನ್ನು ವರುಣನನ್ನು ಅಂಕೆಯಲ್ಲಿ ತಂದು,
ವಾಯುವನ್ನು ಮಿತ್ರನಾಗಿ ಮಾಡಿಕೊಂಡು ತಂದು,
ಸುಖವು, ಸವಿಯು, ಸೊಗಸು, ಚೆಲುವು ಕೂಡಿಬಂದ ನಾಡು;
ಇದುವೆ ನಾಡು, ನಮ್ಮ ನಾಡು, ನಮ್ಮ ನಾಡು,—
ಸ್ವರ್ಗದಿಂದ ಕೊರೆದುತಂದ ವೀರನಾಡು.

ನಾಡು ನಾಡು, ನಮ್ಮ ನಾಡು, ನಮ್ಮ ನಾಡು,—
ನೇಗಿಲೋಳಿಯಿಂದ ಬಂದ ತಾಯಿನಾಡು.
ಸೂರ್ಯ, ಚಂದ್ರ, ತಾರೆಯೊಡನೆ ಉಸಿರಿದೆಮ್ಮ ನಾಡು;
ಹರಿವ ನೀರು, ಚಿಗುರು ಮಾವು ಕೂಡಿದೆಮ್ಮ ನಾಡು;
ನೇಗಿಲೋಳಿಯಲ್ಲಿ ಬೆವರನಿಳಿಸಿದೆಮ್ಮ ನಾಡು;
ಎದೆಯ ಕೊಟ್ಟು ಗದೆಯ ಬೀಸಿ ಉಳಿಸಿದೆಮ್ಮ ನಾಡು;
ನಾಡು ನಾಡು, ನಮ್ಮ ನಾಡು, ನಮ್ಮ ನಾಡು,—
ನೇಗಿಲೋಳಿಯಿಂದ ಬಂದ ತಾಯಿನಾಡು.

# ಪುಳಿನದಲಿ

ಸಂಭ್ರಮದ ಪಟ್ಟಣವ ಹಿಂದಕ್ಕೆ ಬಿಟ್ಟು,
ಮೋಹಿಸುವ ಗೆಳೆಯರನು ನಿಮಿಷಕ್ಕೆ ಮರೆತು,
ಈ ನಿನ್ನ ಪಾವನದ ಪುಳಿನದಲಿ ನಿಂದು
ಕೆಳಗಿಳಿವ ನೇಸರನ ನಾ ಕಂಡುದುಂಟು.

ಆಸೆಗುಡಿ ಬಿಟ್ಟಿರುವ ಜೀವನದ ಲತೆಗೆ
ನೀರುಣಿಸುವಾರೈಕೆ ತೋರಿಸುವ ಮುಂಚೆ
ಈ ನಿನ್ನ ಪಾವನದ ಪುಳಿನದಲಿ ನಿಂದು
ಸಲ್ಲಿತಿಹ ದಿನವನ್ನು ನಾ ಮರೆತುದುಂಟು.

ಅಂತೆಯೇ ಚಂದಿರನು ಮೂಡುತಿರಲಾಚೆ
ನೇಸರನು ಮುಳುಗುತಿಹ ದೃಶ್ಯವನು ಕಂಡು,
ಸುಖದಲ್ಲಿ ದುಃಖದಲಿ ತೂಗುತಿಹ ಬುವಿಯು
ನೋಡುತ್ತ ವರಕವಿಯು ನಾ ನೆನೆದುದುಂಟು.

ಮತ್ತೊಮ್ಮೆ ಮುಗುದೆಯರು ಮಕ್ಕಳೊಡಗೂಡಿ
ಸಂಜೆಯಲಿ ಚೆಲ್ಲಾಟವಾಡುತ್ತ ಬಳಿಕ
ಹಿಂದಕ್ಕೆ ನಡೆದಂತೆ ಭೂವ್ಯೋಮದಲ್ಲಿ
ಬರಿದಾದ ಶೂನ್ಯತೆಯು ತಾ ಹರಿದುದುಂಟು.

ಈ ನಿನ್ನ ಪಾವನದ ಪುಳಿನಕ್ಕೆ ಬಂದು
ಹಿಂದಿಲ್ಲಿ ಮೆಟ್ಟಿದ್ದ ಅಡಿಯನ್ನು ನೆನೆದು,
ಈಹೊತ್ತು ನೆನೆಯುತ್ತ ಆ ದಿನದ ಸೊಂಪು
ಇನ್ನೊಂದು ಅಡಿಯನ್ನು ಒತ್ತುತಿಹೆನಿಂತು.

# ದಿನ ಬಂದಿತು

೧

ಉರುಳಿತು ಉರುಳಿತು ಇರುಳಿರುಳು,
ಬಂದಿತು ಬಂದಿತು ದಿನ ದಿನವು.

ಇಂಪಿನ ಹಕ್ಕಿಯು ಹಾಡಿದ ಗೀತೆ
ಅಮೃತವ ಸುರಿಸಿದೆ ಹೂಗಳ ಮೇಲೆ;
ಹೂಗಳ ಮುಡಿಯುವ ಹೆಣ್ಣುಗಳಿಲ್ಲ;
ಚಿಟ್ಟೆಯ ಹಿಡಿಯುವ ಮಕ್ಕಳು ಇಲ್ಲ.

ಉರುಳಿತು ಉರುಳಿತು ಇರುಳಿರುಳು,
ಬಂದಿತು ಬಂದಿತು ದಿನ ದಿನವು.

೨

ಉರುಳಿತು ಉರುಳಿತು ಇರುಳಿರುಳು,
ಬಂದಿತು ಬಂದಿತು ದಿನ ದಿನವು.

ತಂಪಿನ ಗಾಳಿಯು ರಯ್ಯನೆ ತೀಡಿ,
ಅಲರಿನ ತಳಿರಿನ ಮೇಲಕೆ ಬೀಸಿ,
ಲತೆಗಳ ಕಿವಿಯಲಿ ತುಂಬಿಯು ನುಡಿಸಿ,
ಮೆಲ್ಲನೆ ಬೀಸಿದೆ ಗಂಧವ ಹೇರಿ.

ಉರುಳಿತು ಉರುಳಿತು ಇರುಳಿರುಳು,
ಬಂದಿತು ಬಂದಿತು ದಿನ ದಿನವು.

೩

ಉರುಳಿತು ಉರುಳಿತು ಆ ಇರುಳು,
ಬಂದಿತು ಬಂದಿತು ಈ ದಿನವು.

ಪೊಡವಿಯ ಉದ್ದಕು ನನ್ನಿಯ ಸುರಿದು,
ಬಾನಿನ ಅಗಲಕು ಚೆಲುವನು ಬಳಿದು
ನಡೆದಳು ಹೊನ್ನಿನ ಬಣ್ಣದ ಉಷೆಯು,
ನಡೆದಳು ನನ್ನಿಯ ಚೆನ್ನಿನ ಉಷೆಯು.

ಉರುಳಿತು ಉರುಳಿತು ಆ ಇರುಳು,
ಬಂದಿತು ಬಂದಿತು ಈ ದಿನವು.

೪

ಉರುಳಿತು ಉರುಳಿತು ಇರುಳಿರುಳು,
ಬಂದಿತು ಬಂದಿತು ದಿನ ದಿನವು.

ಮನೆಮಟದೊಂದಿಗೆ ನಿಮ್ಮಯ ಸಾವೆ?
ದೇವರ ಸೃಷ್ಟಿಗೆ ಕುರುಡರು ನೀವೆ?
ಪಾವನೆ, ಶಾಶ್ವತೆ, ರಮಣೀಯೆ ಉಷೆಯು!—
ನಿಮ್ಮನು ಕಾಣದೆ ಹೋದಳು ಉಷೆಯು!

ಉರುಳಿತು ಉರುಳಿತು ಇರುಳಿರುಳು,
ಬಂದಿತು ಬಂದಿತು ದಿನ ದಿನವು.

# ಮನಸ್ಸಾಕ್ಷಿ

ತಂಗಾಳಿ ತೀಡುತಿದೆ, ಮನವೆಲ್ಲ ತುಂಬುತಿದೆ;
ಚಂದಿರನ ಕದಪಿನಲಿ ಜೊನ್ನ ಬೆಳಗುತಿದೆ;
ತಾರೆಗಳು ತಾವಡಗಿ ನಿಂದಿಹವು ಹಿಂದೆ;
ಚಂದಿರನ ತುಟಿಯಲ್ಲಿ ಸವಿಯು ಜಿನುಗುತಿದೆ.

ಇವನಾರು? ನೀನೇಕೆ ಹೃದಯದಲಿ ಬಂದು
ಅಲ್ಲೋಲಕಲ್ಲೋಲ ಮಾಡುವೆಯ ನಿಂದು?
ಬಿರುಗಾಳಿ ಬೀಸುತಿದೆ, ಕೊಚ್ಚುತಿದೆ ನೆರೆಯು,
ಸಿಡಿಯುತಿದೆ, ಉರುಳುತಿದೆ ಬ್ರಹ್ಮಾಂಡದಿರವು.

## ಕರೆ

ಅಜ್ಞಾನದಾವರಣದಡಿಯಲ್ಲಿ ಹುದುಗಿ,
ಮೂಢತೆಯ ಪಾದಗಳ ಹತಿಯಲ್ಲಿ ಜಗ್ಗಿ
ತೋರದಿಹ ಜೀವನದ ಮೊಳೆಯೆ,
ನಾಡಿದಿನ ಆಸೆಗಳ ಕುಡಿಯೆ,
ಭೇದಿಸುತ, ಸ್ಫೋಟಿಸುತ ಮೇಲಕ್ಕೆ ನೆಗೆಯೈ!
ಗುಡುಗುತಿಹ ಬಾನಿನಾಚೆಯ ಕರೆಗೆ ಬಾರೈ!

ಈ ನಾಡು, ಈ ಜನವು ನೆಲದಡಿಗೆ ಹೂತು,
ನಿಮಿಷಕ್ಕೆ ನಿಮಿಷಕ್ಕೆ ಪಾತಾಳಕಿಳಿದು-
ಹೋಗುತಿದೆ ಆಸೆಯನು ನೀಗಿ,
ಮುರಿಯುತಿದೆ ಜೀವನವ ಕಳಚಿ!
ಸೀಳುತಲಿ, ಸಿಡಿಯುತಲಿ ಮೇಲಕ್ಕೆ ನೆಗೆಯೈ!
ಗುಡುಗುತಿಹ ಬಾನಿನಾಚೆಯ ಕರೆಗೆ ಬಾರೈ!

ಈ ಬೀಜ, ಈ ಮಣ್ಣು, ಈ ನನ್ನ ಬೆವರು
ಪೂರ್ವದಲಿ ಸಾಧಿಸಿತು ಪುತ್ಥಳಿಯ ಹೊನ್ನು;
ಹಿಂಗುತಿದೆ ಮಣ್ಣಿನಲಿ ಬೆವರು,
ಕೂಡುತಿದೆ ಬೀಜವದು ಮಣ್ಣು.
ಸಾರವಿದೆ, ಶಕ್ತಿಯಿದೆ, ವಿದ್ಯೆಯಿದೆ, ನೆಗೆಯೈ!
ಗುಡುಗುತಿಹ ಬಾನಿನಾಚೆಯ ಕರೆಗೆ ಬಾರೈ!

ಜೀವನದ ತಳಹದಿಯ ಕಂಪಿಸುವ ಶಕ್ತಿ!—
ಗುಡುಗುತಿದೆ ಬಾನಿನಾಚೆಯ ಕರೆಯ ಸೂಕ್ತಿ!
ಉರುಳುತಿದೆ ನಾ ನಿಂತ ಭುವಿಯು,
ಸಿಡಿಯುತಿದೆ ನಾ ಕಂಡ ನಭವು,
ಮೇಲ್ಮೊಗದ ಬೀಜವಿದು ಪುಟಿಯುತಿದೆ ನೆಗೆದು,
ವರ ಸಸ್ಯಶಾದ್ವಲೆಗೆ ಛತ್ರವನು ಪಿಡಿದು!

# ವನಿತಾಂಗಿ

ಈ ಬಳ್ಳಿ, ವನಿತಾಂಗಿ, ಪಲ್ಲವದ ವಸನದಲಿ,
ಕುಸುಮಗಳ ರವಕೆಯಲಿ, ಕೋಮಲದ ಮೈಯಲ್ಲಿ,
ನಳಿದಾದ ತೋಳಲ್ಲಿ, ನುಣುಪಾದ ಬೆರಳಲ್ಲಿ,
ಚೆಂದಿರನ ಮೊಗದಲ್ಲಿ, ತಾರಗೆಯ ನೋಟದಲಿ,
ಕಿರಿದಾದ ನಗೆಯನ್ನು ಬೀರುತ್ತ ದಾರಿಗನ
ನಯನಗಳ ಕದಿಯುತಿಹಳು.
ನಾ ನಿನ್ನ ರೂಪಕ್ಕೆ, ಎಲೆ ಲತೆಯೆ, ಮರುಳಿಹೆನು,
ಸೋತಿಹೆನು. ಹಿಂದೊಮ್ಮೆ ನಾನಿಲ್ಲಿ ಹಾಯುತ್ತ
ಬಂದಿದ್ದೆ; ಆಗಿನ್ನು ನೀ ನಿನ್ನ ಪೇಶಲದ
ದೇಹದಲಿ ಚೆಲುನಗೆಯ ಪೂರ್ಣತೆಗೆ ವ್ರತವಿಡಿದು,
ಮೌನದಲಿ ಒಳಹೊರಗು ಮರೆಮರೆದು ಬಳುಕುತ್ತ
ಬೆಳೆಯುತ್ತಲಿದ್ದೆ.

ಆರಡಿಯ ನವವಧುವೆ!
ಇಂಚರದ ನಿನ್ನಿನಿಯ—ಚಿರಂತನ ರಸಋಷಿಯು—
ಆವ ನಾಡಿನ ಜೇನ ಸವಿಗತಿಥಿಯಾಗಿಹನು?
ಈ ನಿನ್ನ ಮಿನುಗುತಿಹ ಕೋಮಲದ ಕಿರುನಗೆಯು
ಆವ ಸಾಹಸದ ಪಥಿಕನಿಗೊಂದು ಕುಡಿತಾರೆ?
ಎಲೆ ಮುಗುದೆ, ಕಂಪಿಸುವ ನುಣ್ಣನೆಯ ತುಟಿಯಿಂದ
ಆವ ದೇವನ ಮಂತ್ರವನು ಜಪಿಸುತಿಹೆ ನೀನು?
ಬಳುಕುತಿಹೆ ನೀನೇಕೆ? ಕಂಪಿಪುದು ಬೇಡಮ್ಮ,—
ಮಣಿಯುವೆನು ನಾ ನಿನ್ನ, ಮೂರಡಿಯ ದೂರದಲಿ ನಿಂತು.

ಬೆಳಗಮ್ಮ! ಬೆಳಗು! ಬಳುಬಳುಕಿ ನೀ ಬಳೆದು.
ಈ ನಿನ್ನ ಪಾವನದ ಕಿರುನಗೆಗೆ ಶಾಶ್ವತವು
ತಾರಗೆಯ ಸರಿಸಾಟಿ ವಿಶ್ವದಲಿ ಸಮನಿಸಿರಲಿ!
ಈಯೆನ್ನ ಬೆರಳುಗಳ ಕಲ್ಮಷದ ಯೋಗದಲಿ
ನುಣ್ಣನೆಯ ಈ ನಿನ್ನ ಹೂದಳವು ಉರಿಯದಿರಲಿ!
ಈ ನಿನ್ನ ದರಹಾಸ, ಈ ನಿನ್ನ ಕೋಮಲತೆ
ಹಗಲಿರುಳು ಈ ನನ್ನ ಹೃದಯದಲಿ ಮೂಡುತಿರಲಿ!

# ಕವಿಯೆ, ಯಾವನಕ?

**ಕಾ**ವ್ಯರಸದ ಶರಧಿಯಲ್ಲಿ ಭೂಮಿವ್ಯೋಮ ಕೂಡುವೆಡೆಗೆ,
ನೋಳ್ಪ ದೃಷ್ಟಿ ನೋಳ್ಪ ವರೆಗೆ, ಒಂಟಿಯಾಗಿ ತೇಲುವೆ!
ಬಾನಿನಲ್ಲಿ ಚುಕ್ಕಿಯೊಂದು, ನೀರಿನಲ್ಲಿ ಗಾಳಿಯೊಂದು
ತಪ್ಪದೆನಗೆ ಸಿಕ್ಕುವನಕ ಒಂಟಿಯಾಗಿ ತೇಲುವೆ!

ಕಾವ್ಯರಸದ ಶರಧಿಯಲ್ಲಿ ಗುಹೆಗಳಿಂದ ತೆರೆಯ ವರೆಗೆ
ಲವಣವಾಗಿ ಲವಣದಲ್ಲಿ ಒಂಟಿಯಾಗಿ ಸೇರುವೆ!
ನೀರಿನೊಳಗೆ ಬಿಂದುವೊಂದು, ಬಿಂದುವೊಳಗೆ ಶಕ್ತಿಯೊಂದು
ತೋರಿ ಕೂಡುವನಕ ನಾನು ಒಂಟಿಯಾಗಿ ಸೇರುವೆ!

ಕಾವ್ಯರಸದ ಶರಧಿಯಲ್ಲಿ ಭೋರ್ಗರೆಯುವ ಕೂಗಿನಲ್ಲಿ
ಸ್ವರವನೆತ್ತಿ ಮೇಳವಿಟ್ಟು ಒಂಟಿಯಾಗಿ ಕೂಗುವೆ!
ಮನವು ಒಂದು ಕೇಳುವನಕ, ಗಾಳಿಯೊಂದು ಬೀಸುವನಕ,
ಕಂಠದಲ್ಲಿ ಕಂಠವಿಟ್ಟು ಒಂಟಿಯಾಗಿ ಕೂಗುವೆ!

# ಬಯಸಿದ ಐಸಿರಿ

ಮಳೆಯಲ್ಲಿ ನೀರಾಗಿ, ಬೀಜದಲಿ ಮೊನೆಯಾಗಿ,
ಹೂವಿನಲಿ ಹಣ್ಣಾಗಿ ತೋರುತಿಹ ನನ್ನುಸಿರ ಉಸಿರೆ!
ಮಳೆ ಸುರಿದು, ಮೊನೆ ಬೆಳೆದು, ಹೂವಿನಲಿ ಹಣ್ಣಾಗಿ
ಬೆಳಗುತಿದೆ ಈ ಸೃಷ್ಟಿ—ಉಸಿರಾಡು, ನನ್ನುಸಿರ ಉಸಿರೆ!

ಗುಡಿಸಲಿನ ಅಂಚಿನಲಿ ಶಾದ್ವಲದ ಸಿರಿಸೆರಗು
ಚಾಚುತ್ತ ಹಾಸಿಹುದು, ಕಣ್ಣಿನಲಿ ಕಣ್ಗೊಂಬೆಯಾಗಿ!
ಬಳ್ಳಿಯಲಿ ಚಿಗುರೆದ್ದು, ಸಸ್ಯದಲಿ ಹೂ ಬಿಟ್ಟು
ಮೆರೆಯುತಿದೆ ಈ ಸೃಷ್ಟಿ—ಉಸಿರಾಡು, ನನ್ನುಸಿರ ಉಸಿರೆ!

ನೀ ನಿನ್ನ ಕನಸಿನಲಿ ಬಹುಕಾಲ ಬಯಸಿದ್ದ
ಹೊಂಬಣ್ಣದೈಸಿರಿಯ ಸಿಂಗರವ ಮಾಡಿ,
ಹಾಲಿನಲಿ ಜೇನ್ ಬೆರಸಿ, ಮಧುರಿಮೆಗೆ ಮಧು ಬೆರಸಿ
ನಲಿಯುತಿದೆ ಈ ಸೃಷ್ಟಿ—ಉಸಿರಾಡು, ನನ್ನುಸಿರ ಉಸಿರೆ!

ತೊನೆಯುವಳು ಆ ಬಳ್ಳಿ, ಕರೆಯುವನು ಈ ಮರನು,
ಪರಿಮಳಿತ ಮಾರುತನು ನುಡಿಸುವನು ತುಟಿಯಲ್ಲಿ ಕೊಳಲು;
ಬಯಸಿದುದು ಕೈಗಾಯ್ತು; ನೀರ್ಗುದುರೆ ಬಳಿಗಾಯ್ತು;
ಹೊನ್ನಾಯ್ತು ಈ ಸೃಷ್ಟಿ—ಉಸಿರಾಡು, ನನ್ನುಸಿರ ಉಸಿರೆ!

# ಆಯಿಾರೇ!

ಆಯಿಾರೇ, ಆಯಿಾರೇ, ಬಂದಳಿದೋ ಅವಳು!
ಕಾಲಿನ ಗೆಜ್ಜೆ ನಲಿದಾಡುತಿವೆ!
ಆಯಿಾರೇ, ಆಯಿಾರೇ, ಬಂದಳಿದೋ ಅವಳು.
ಕೈಗಳ ಬಳೆಯೂ ಸರಿದಾಡುತಿವೆ!
ಆಯಿಾರೇ, ಆಯಿಾರೇ, ಬಂದಳಿದೋ ಅವಳು!

ಕುಂಕುಮತಿಲಕ ಹಣೆಯಲಿ ಹಚ್ಚಿ,
ಸೀರೆಯ ಮುಸುಕು ಶಿರದಲಿ ನಡಿಸಿ,
ಹಜ್ಜೆಯ ಮೇಲೆ ಹಜ್ಜೆಯನಿರಿಸಿ
ಆಯಿಾರೇ, ಆಯಿಾರೇ, ಬಂದಳಿದೋ ಅವಳು!

ಗೆಜ್ಜೆಯ ದನಿಯು ನಡೆವುದು ಹಿಂದೆ.
ಬಳೆಗಳ ಸನವು ಸುಳಿವುದು ಹಿಂದೆ.
ಕಾಲ್ಗಳ ಬೆರಳಲಿ ಹೋದಳು ಹಿಂದೆ.
ಆಹಾಹಾ! ಆಹಾಹಾ! ಹೋದಳಿದೋ ಅವಳು!

ಕನ್ನಡಿಯಲ್ಲಿ ಮುಖವನು ಪಿಡಿದು,
ಕಣ್ಣಿಗೆ ಕಾಡಿಗೆರೇಖೆಯ ಬಳೆದು,
ಹಜ್ಜೆಯ ಮೇಲೆ ಹಜ್ಜೆಯನಿಟ್ಟು
ಆಯಿಾರೇ, ಆಯಿಾರೇ, ಬಂದಳಿದೋ ಅವಳು!

ಮುಸುಕಿನ ರಮಣಿಗೆ ಸಿಂಗರ ಬೇಕೆ?
ಚೆಲುವಿನ ರಾಣಿಗೆ ಕಾಡಿಗೆಯೇಕೆ?
ಕನ್ನಡಿಗೊಂದು ಕನ್ನಡಿ ಬೇಕೆ?
ಆಯಿಾರೇ, ಆಯಿಾರೇ, ಬಂದಳಿದೋ ಅವಳು!

# ಮೈಸೂರು ಮಲ್ಲಿಗೆಗೆ*

ಸ್ವಾಗತವು ಸುಸ್ವಾಗತವು ನಿನಗೆ!
ಮೈಸೂರು ಮಲ್ಲಿಗೆಯ ಮುಗುಳೆ!

ಸಿಂಗರದ ತೌರೂರು ಒನಪುವಯ್ಯಾರದ ಹು-
ಟ್ಟೂರು ತಾನಾಗಿ ಪದ್ಮಾವತೀಚರಣಚಾ-
ರಣ ಚಿತ್ತಸದ್ಮ ಜಯದೇವ ವರಕವಿಯ ಹಿರಿ-
ನಾಡಿನಲಿ ಜೀವನದ ಚೆಲುವೆಲ್ಲ ಕಣ್ಣೀರ
ಗಂಗೆಯಲಿ ಚಳಿಗಟ್ಟಿ, ಬಾಳುವೆಯ ಸೊಗಸೆಲ್ಲ
ಬಿಸಿಯುಸಿರ ತಾಪದಲಿ ತರಗಾಗಿ ಸುಟ್ಟಳಿದು
ರೂಪುಗೆಡುತಿಹುದು ಹಾಯ್! ದಿನದಿಂದ ದಿನವು.
ನಿಷ್ಕಲ್ಮಶದ ನಲ್ಮೆರನ್ನದುಂಗುರದರಸಿ
ಮೂರ್ತಿಮತಿ ಸತ್ಕ್ರಿಯೆಯು ಮುನಿಸುತೆ ಶಕುಂತಳೆಯು
ಬಳೆದು ಬಾಳ್ದಿದ್ದ ಕವಿ ಕಾಳಿದಾಸನ ನಾಡಿ-
ನಲ್ಲಿ ನೆಳಲಿರದೊಂದು ತರದ ಬದುಕಿನ ಬಾಳ್ವೆ
ಕದಿಯುತಿದೆ ಜೀವನದ ತೇಜವನು; ಸವಿಯೆಲ್ಲ
ಉಪ್ಪಾಗಿ ಬಿಗಿಯುತಿದೆ ದಿನದಿಂದ ದಿನವು.—
ಸ್ವಾಗತವು ಸುಸ್ವಾಗತವು ನಿನಗೆ,
ಮೈಸೂರು ಮಲ್ಲಿಗೆಯ ಮುಗುಳೆ!

ಮೈಸೂರು ಮಲ್ಲಿಗೆಯ ಈ ಸವಿಯರಳಿದೊಸಗೆ
ಜೀವನದ ಸೌರಭವ ತೀಡುತಿರಲನಿಶ ದಶದಿಶೆಗೆ!

ಸಿರಿನಾಡಿನಾರಡಿಯ ರಸಿಕನನು ನವವಧುವು
ಹೂವಿನಲಿ ಸೆಳೆದು ಬಂಧಿಸಿದೆಮ್ಮ ನಾಡಿನಲಿ

---

*ಶ್ರೀ. ಕೆ. ಎಸ್. ನರಸಿಂಹಮೂರ್ತಿಯವರ 'ಮೈಸೂರು ಮಲ್ಲಿಗೆ' ಎಂಬ ಕವಿತಾ ಸಂಗ್ರಹವನ್ನು ಕುರಿತು.

ಲಲನೆಯರಿಗನ್ನಬ್ರಹ್ಮದ ದೇಗುಲದ ಡೊಂಬ-
ರಾಟದಲಿ ಮೈನವಿರು ಮುಗ್ಗರಿಸಿ ಮುಗಿಯುತಿದೆ,
ಮುಗ್ಗರಿಸಿ ಮುಗಿಯುತಿಹುದು.

ವಿರಹಿಗಳ ದೌತ್ಯವನು ಶ್ರದ್ಧೆಯಲಿ ಕೈಗೊಂಡು
ವಿದ್ಯುದ್ರಮಣಿಯೊಡನೆ ಚಿರಕಾಲ ಸಂಯೋಗ-
ವರವನ್ನು ಪಡೆದಿದ್ದ ಆ ಮುಗಿಲು ಈಹೊತ್ತು
ವಿರಹಿಜನರೊಳಗೆ ನಂಬಿಗೆತಪ್ಪಿ ಗುಡುಗುಡುಗಿ
ಕಿವಿಗೊಡದೆ ಪಾರುವುದು ಭೀಕರಾಕಾರವನು ತಾಳಿ.
ಲಲನೆಯರು ಕುಸುಮಕೋಮಲದ ಕೈಗೊಟ್ಟು ನ-
ಕ್ತಂ ಭೀರು ಪುರುಷರನು ನಡೆಸಿದೀ ನಲ್ಮೆಯಾ
ನಾಡಿನಲಿ ಆ ಚದುರೆಯರು ಕುರುಡರನ್ನೊಯ್ವ
ಕುರುಡಿಯರ ಸಾಟಿನಲಿ ತಿರುಗುತ್ತ ಬಳಲುವರು
ನೂರಾರು ಸುತ್ತು ಸುತ್ತಿ!

ಮೈಸೂರು ಮಲ್ಲಿಗೆಯು ಈ ಸವಿಯರಳಿದೊಸಗೆ
ನುಣ್ಣನೆಯು ಬದುಕನ್ನು ತೀಡುತಿರಲನಿಶ ದಶದಿಶೆಗೆ!

# ದೂರ್ವಾಂಕುರದ ಚೆಲುವೆ

ಮಳೆಗಾಲದಾರಂಭ ಗುಡುಗಿದೊಡನೊಮ್ಮೆ ಸ-
ರ್ವಾಂಗದಲಿ ಸರ್ವಾಣು ಚೇತರಿಸಿ, ಪ್ರಗತಿ ಮುಖ-
ಗೊಂಡು ಮುಂದೊತ್ತು ಕಲ್ಪಿಸುವ ಕಾಲದಲಿ, ನುಂ-
ಬನಿಯ ಸೋನೆಯು ಬೀಸಿ ನೆಲವೆಲ್ಲ ಮೆಲ್ವಾಂತು
ಬರುವಂದು, ತನ್ನೆಲ್ಲ ದೇಹಕ್ಕೆ, ತನ್ನೆಲ್ಲ
ಧ್ಯೇಯಕ್ಕೆ, ತನ್ನೆಲ್ಲ ಜೀವನಕೆ ಬಿರುವಲಗು
ಪಿಡಿಸಿ, ನೂರಾಗಿ, ಸಾಸಿರದ ನೂರಾಗಿ ತಾ
ಬಿತ್ತರಿಪಳೀ ದೂರ್ವೆ ಗಾವುದಕೆ ಗಾವುದಕೆ
ಬೇರುಗಳ ಮುಂದೊತ್ತಿ ನಿಂದಿರಿಸಿ ಮುಂದಕ್ಕೆ ನೆಗೆದು.

ಮೇಲ್ಮೊಗದ ದೂರ್ವಾಂಕುರದ ಚೆಲುವೆಯೆ!
ಕೋಮಲದ ಹಸುರುಡೆಯ ಮೋಹನದ ನರ್ತಕಿಯೆ!
ನಲಿನಲಿಯು, ಕುಣಿಕುಣಿಯು, ಮುಂದಮುಂದಕೆ ಹಾಯು!
ಈ ನಿನ್ನ ಸಂತತದ ತುಂಬುಮೈ ಬಿತ್ತರದಿ
ಹಸುರುಡೆಯ ಸವಿಸೊಗಸು ಇರ್ಮ್ಮೈಯ್ಯ ಕಳೆಯಾಂತು,
ಪೆರೆ ಕರೆದ ಜೊನ್ನ ತೆಳುಸೋನೆಯಲಿ ಮೃದುವಾಂತು,
ಉಷೆ ಸುರಿದ ತುಂತುರಿನ ತನಿಸೊದೆಗೆ ಶುಚಿಯಾಂತು,
ಮೋಹನದ ಬೆಳವಿನಲಿ ಹೊಸ ಕುಡಿಯು ಚೇತರಿಸಿ,
ಸೃಷ್ಟಿಯನು ಪಾವನಕೆ, ದೃಷ್ಟಿಯನು ಶಾಶ್ವತಕೆ
ನೇರ್ಪಡಿಸಿ, ದೂರ್ವಾಂಕುರದ ಚೆಲುವೆ, ಬಿತ್ತರಿಸಿ
ಬೆಳಗವ್ವ! ದೂರ್ವಾಂಕುರದ ಹೇ ಚೆಲುವೆಯೆ!

# ಕನ್ನಡದ ಹಿರಿಯರಿರ!

ಕನ್ನಡದ ಹಿರಿಯರಿರ!
ಕನ್ನಡದ ಕಿರಿಯರಿರ!
ಇದುವೆ ನಿಮಗಾಗಿ,
ಇದು ನಾಳೆಗಾಗಿ.

ಕನ್ನಡದ ಮಕ್ಕಳಿರ!
ಕನ್ನಡದ ಮರಿಗಳಿರ!
ಕನ್ನಡದ ಈ ಚೆನ್ನು—
ಇದುವೆ ನಿಮಗಾಗಿ,
ಇದು ನಾಳೆಗಾಗಿ.

ಕನ್ನಡದ ತುಂಬಿಗಳು
ಪಡುವಣದ ತುಂಬಿಗಳು
ಮಧುಪರಿಚ್ಛೇದಾನುಭವರು
ಸುಮದಿಂದ ಸುಮಗಳಿಗೆ
ರಸದಿಂದ ರಸಗಳಿಗೆ
ಹಿಂಡಾಗಿ ಹಾರಿಹರು ಇವರು.

ಕನ್ನಡದ ಚೆಲುವೆಯರೆ!
ಕನ್ನಡದ ಚೆನ್ನಿಗರೆ!
ಕನ್ನಡದ ಈ ಚೆನ್ನು—
ಇದುವೆ ನಿಮಗಾಗಿ,
ಇದು ನಾಳೆಗಾಗಿ.

# ಹೂಕನಸು

ಜ್ಯೋತ್ಸ್ನವಿತಾನದಲಿ ಪಾರಿಜಾತದ ತರುವು
ಮೆಲ್ವಾಸ ಭುವಿಗೊರಗಿ ಪವಡಿಸಿದೆ ನೆರಳಿನಲಿ;
ದಣಿವಾರಿಸುತ್ತಿಹವು ಹೂಕನಸ ರಾಜ್ಯದಲಿ
ಆಗಸದ ಸುಯಿಲುಗಳು ಭುವನದಾಚೆಯು ಪಡೆದು.

ಸತ್ಯಸೌಂದರ್ಯಪೀಯೂಷದಲಿ ಶುಚಿಯಾಂತು
ಬಾನಿನಲಿ ಮೇಲೆದ್ದು ಬಂದಿರುವ ಚಂದಿರನು
ಹಿಗ್ಗುತಿಹ ಮನದೊಡನೆ ಬಗ್ಗಿಸುತ ಮೊಗವನ್ನು
ಸವಿಮುದ್ದನೀಯುವನು ಈ ಭುವಿಗೆ ನಿಟಿಲದೊಳು.

ಹೇ ದೇವ! ದಿನದಿನದ ತಾಪದಲಿ ಬಳಲಿದ್ದ
ರಸ ಋಷಿಯು ಕನಸಿನಲಿ ಹಂಬಲಿಸಿದೀ ಶಾಂತಿ
ತಣಿಸುತಿದೆ ಭುವಿಯನ್ನು ನಾಲ್ದೆಸೆಗೆ ಹರಡುತ್ತ,

ಕಟ್ಟಿರುಳ ಭೀಕರದ ತಮವನ್ನು ಬೆಳಬೆಳಗಿ:
ದ್ಯಾವಾಪೃಥಿವಿಗಳಿವು ಕೂಡುತಿವೆ ಜೀವನದ
ತುಟಿಯಲ್ಲಿ ಮೆಲ್ನುಗುಳ ನಗೆಯನ್ನರಳಿಸುತಲಿ.



